ಮೇಲ್ಕಂಡಂತೆ ಶ್ರೀ ಜೆ.ಆರ್. ಗೌರೀಶಾ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 10.989 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರ್‌ನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 9.00 ಹೆಚ್ಚಿನ ದರಗಳಿಗೆ ಅಂದರೆ ರೂ. 1,40,90,964/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ಕೆಜಿದು 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ತಾಲ್ಲೂಕು, ಬೆಣ್ಣೂರು ನಾಲೆಗೆ ಕಾಲುವೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,29,27,490/–ಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,40,90,964/–ಗಳಿಗೆ (ರೂ. ಒಂದು ಕೋಟಿ ನಲವತ್ತು ಲಕ್ಷ ತೊಂಬತ್ತು ಸಾವಿರದ ಒಂಬೈನೂರ ಅರವತ್ತಾ ನಾಲ್ಕು ರೂಪಾಯಿಗಳು ಮಾತ್ರ) ಶ್ರೀ ಜೆ.ಆರ್. ಗೌರೀಶಾ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 744

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ನಾಗಮಂಗಳ ತಾಲ್ಲೂಕು, ಹೊಣಕೆರೆ ಹೋಬಳಿ, ಬಸವನಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** **1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/ಭೂಸ್ವಧೀನ/11–12/195 ದಿನಾಂಕ: 19–01–2012.

**ಪ್ರಸ್ತಾವನೆ:**

ನಾಗಮಂಗಲ ತಾಲ್ಲೂಕು, ಹೊಣಕೆರೆ ಹೋಬಳಿ ಬಸವನಕೆರೆ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜೋಡಿಅಲ್ಪಹಳ್ಳಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು, ಮಂಡ್ಯ ಇವರು ಎಂ.ಎ(ಎಲ್‌ಎಸಿ) ಹಾಗೂ ನಾಗಮಂಗಲ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 19–01–2012ರ ಪತ್ರದಲ್ಲಿ ಕೋರಿದ್ದಾರೆ.

ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 28–11–2002 ರಂದು ಮತ್ತು 6(1)ರ ಅಧಿಸೂಚನೆಯನ್ನು ದಿನಾಂಕ: 30–09–03 ರಂದು ಹೊರಡಿಸಲಾಗಿದೆ. ವಿಶೇಷ ಭೂಸ್ವಾಧೀನಾಧಿಕಾರಿಗಳು ದಿನಾಂಕ: 17–10–2005 ರಂದು ಹೊರಡಿಸಿದ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ನಾಗಮಂಗಲ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ: 19–04–2008 ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ. 1,02,000/– ಗಳನ್ನು ನಿಗದಿಪಡಿಸಿದೆ. ಸಿವಿಲ್ ನ್ಯಾಯಾಲಯದ ಆದೇಶದ ಮೇಲೆ ಮಂಡ್ಯ ಜಿಲ್ಲಾ ನ್ಯಾಯಾಲಯದಲ್ಲಿ ಮೇಲ್ಮನವಿ ಎಂ.ಎ. ದಾಖಲಿಸಿದ್ದು, ಜಿಲ್ಲಾ ನ್ಯಾಯಾಲಯವು ದಿನಾಂಕ: 26–02–2010 ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,63,200/– ಗಳನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಅದರಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಎಂ.ಎ. (ಎಲ್ ಎಸಿ) ಸಂಖ್ಯೆ | ಜೋಡಿಅಲ್ಪಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ– | ಗುಂ. | ಪರಿಹಾರ ಮೊತ್ತ ರೂ. ಗಳಲ್ಲಿ |
|---|---|---|---|---|---|---|
| 1 | 199/07 | 125/08 | 480/1 | 0 | 10 | 70565 |
| 2 | 170/07 | 126/08 | 460 | 0 | 1.5 | 10585 |
| 3 | 174/07 | 127/08 | 435 | 0 | 10.5 | 74093 |
| 4 | 201–07 | 128/08 | 450 | 0 | 4 | 28226 |
| | | | 466 | 0 | 5 | 35283 |
| 5 | 177/07 | 129/08 | 425 | 0 | 10 | 70565 |
| | | | 430 | 0 | 2 | 10944 |
| 6 | 176/07 | 130/00 | 461/1 | 0 | 3 | 16417 |
| 7 | 191/07 | 131/08 | 423 | 0 | 10 | 70565 |
| 8 | 192/07 | 132/08 | 421/4 | 0 | 4 | 28226 |

| | | | | | | |
|---|---|---|---|---|---|---|
| 9 | 200/07 | 133/08 | 458/1 | 0 | 1 | 7057 |
| | | | 458.2 | 0 | 1.5 | 10585 |
| 10 | 196-07 | 134/08 | 445 | 0 | 2.75 | 19405 |
| 11 | 185/07 | 13/08 | 447 | 0 | 6 | 42339 |
| 12 | 180/07 | 135/08 | 445 | 0 | 2.5 | 1641 |
| 13 | 182/07 | 166/08 | 444 | 0 | 29 | 204639 |
| 14 | 198/07 | 167/08 | 433 | 0 | 15 | 105848 |
| | | | 451 | 0 | 2.5 | 17641 |
| | | | 465 | 0 | 5 | 35283 |
| 15 | 197/07 | 168/08 | 433 | 0 | 15 | 105848 |
| | | | 451 | 0 | 2.5 | 17641 |
| | | | 465 | | 5 | 35283 |
| 16 | 171/07 | 169/08 | 442 | 0 | 4 | 28226 |
| | | | 467 | 0 | 11 | 77622 |
| 17 | 169/07 | 172/08 | 434 | 0 | 16 | 112904 |
| | | | 436 | 1 | 18 | 49930 |
| | | | 438 | 0 | 4.5 | 12483 |
| 18 | 172/07 | – | 443 | 0 | 4 | 11096 |
| 19 | 173/07 | – | 428 | 0 | 2 | 2379 |
| 20 | 175/07 | – | 448/1 | 0 | 11 | 30513 |
| 21 | 178/07 | – | 446 | 0 | 6 | 16643 |
| 22 | 184-07 | – | 462 | 0 | 1 | 1190 |
| 23 | 186/07 | – | 434 | 0 | 20 | 55478 |
| | | | 436 | 0 | 18 | 49930 |
| | | | 438 | 0 | 4.5 | 12483 |
| 24 | 187/07 | – | 453 | 0 | 1 | 2774 |
| 25 | 181/07 | – | 442 | 0 | 3 | 8322 |
| 26 | 193/07 | – | 419 | 0 | 4 | 11096 |
| | **ಒಟ್ಟು** | | | | | **1517747** |

ಮೇಲ್ಕಂಡ ಎಲ್ಲ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 20 ಭೂಸ್ವಾಪ್ರ 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 98ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ನಾಗಮಂಗಲ ತಾಲ್ಲೂಕು, ಹೊಣಕೆರೆ ಹೋಬಳಿ ಬಸವನಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜೋಡಿಅಲ್ಲಹಳ್ಳಿ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 15,17,747–00 ಗಳ (ಹದಿನೈದು ಲಕ್ಷದ ಹದಿನೇಳು ಸಾವಿರದ ಏಳುನೂರ ನಲವತ್ತೇಳು ರೂ.ಗಳು ಮಾತ್ರ) ಪರಿಹಾರವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ವಿಶೇಷ ಭೂಸ್ವಾಧೀನಾಧಿಕಾರಿ, ಮಂಡ್ಯ ಹಾಗೂ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಮೈಸೂರು ಇವರು ಮೇಲ್ಕಂಡ ಎಲ್ಲಾ ಪ್ರಕರಣಗಳಿಗೆ ಕಾನೂನು ಇಲಾಖೆಯಿಂದ ಮೇಲ್ಮನವಿ ಸಲ್ಲಿಸದಿರುವ ಅಭಿಪ್ರಾಯ (No appeal) ಪಡೆಯುವುದು.
2. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
3. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
4. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-101-3-01-139-ಏತ ನೀರಾವರಿ ಯೋಜನೆಗಳು-ಪ್ರಧಾನ ಕಾಮಗಾರಿಗಳು" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಕೆ.ಸಿ. ಸಿದ್ದಪ್ಪ

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 745 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕಾತ್ರಾಳ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010 ದಿನಾಂಕ: 28–09–2011.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–9/ಕಾತ್ರಾಳ ಸ.ನಿ ಕೆರೆ ಸುಧಾರಣೆ/ 2011–12/555 ದಿನಾಂಕ: 01–02–2012.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕಾತ್ರಾಳ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯು 13ನೇ ಹಣಕಾಸು ಆಯೋಗದ ಅನುದಾನದಡಿ ಕೆರೆಗಳ ಹಾಗೂ ಪಾರಂಪರಿಕ ಜಲಕಾರ್ಯಗಳ ಪುನರುಜ್ಜೀವನ ಯೋಜನೆಯಡಿ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳು 2011–12ನೇ ಸಾಲಿನ ಕ್ರಿಯಾ ಯೋಜನೆಯ ಪಟ್ಟಿಯಲ್ಲಿ ಸೇರಿರುತ್ತದೆ. ಈ ಕಾಮಗಾರಿಯ ರೂ. 90.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 13–12–2011 |
| ಪ್ರಜಾವಾಣಿ ಕನ್ನಡ ದಿನ ಪತ್ರಿಕೆ | 06–12–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 23–01–2012 ರಂದು ತೆರೆದು ಪರಿಶೀಲಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 81,61,441/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| 1 | ಎನ್.ಎಸ್. ಚೌಧರಿ, ಒಂದನೇ ದರ್ಜೆ ಗುತ್ತಿಗೆದಾರರು | 93,23,625/– | 14.24 ಹೆಚ್ಚು |

ಮೇಲ್ಕಂಡಂತೆ ಶ್ರೀ ಎನ್.ಎಸ್. ಚೌಧರಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.24 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 81,61,441/–ಗಳ ಮೇಲೆ ಶೇ. 9.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 88,95971/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 07 ಕೆಜಿದು 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕಾತ್ರಾಳ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸದಂತೆ ಟೆಂಡರಿಗಿಡಲಾದ ಮೊತ್ತು ರೂ. 81,61,441/–ಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 88,95,971/–ಗಳಿಗೆ (ರೂ. ಎಂಬತ್ತೆಂಟು ಲಕ್ಷ ತೊಂಬತ್ತೈದು ಸಾವಿರದ ಒಂಬೈನೂರ ಎಪ್ಪತ್ತೊಂದು ಮಾತ್ರ)ಗಳಿಗೆ ಶ್ರೀ ಎನ್.ಎಸ್. ಚೌಧರಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 746

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಸವದತ್ತಿ ತಾಲ್ಲೂಕಿನ ಬಸರಗಿ ಗ್ರಾಮದ ಹತ್ತಿರ ಮಲ್ಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(2) ದಿನಾಂಕ: 30–07–2010.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ (ಉ) ವಲಯ / ಬಿಜೆಪಿ / ಎಇ–1 / 2011–12 / 534 ದಿನಾಂಕ: 01–02–2012.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಸಮದತ್ತಿ ತಾಲ್ಲೂಕಿನ ಬಸರಗಿ ಗ್ರಾಮದ ಹತ್ತಿರ ಮಲ್ಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರೆತಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ 6ನೇ ಬಾರಿಗೆ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 28–10–2011 |
| ಜಿಲ್ಲಾಟೆಂಡರ್ ಬುಲೆಟಿನ್ | 24–10–2011 |
| ಸಂಯುಕ್ತ ಕರ್ನಾಟಕ ಕನ್ನಡ ದಿನ ಪತ್ರಿಕೆ | 31–10–2011 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | 31–10–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 09–01–2012 ರಂದು ತೆರೆದು ಪರಿಶೀಲಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,23,94,415/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಮತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,56,76,184/– |
| ಕ್ರಮ ಸಂಖ್ಯೆ | ಗುತ್ತಿಗೆದಾರರು ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಮೆ. ಪ್ರದೀಪ ಕನ್‌ಸ್ಟ್ರಕ್ಷನ್ ಕಂಪೆನಿ ಒಂದನೇ ದರ್ಜೆ ಗುತ್ತಿಗೆದಾರರು | 1,81,01,407/– | 46.04 ಹೆಚ್ಚು | 15.47 ಹೆಚ್ಚು |

ಮೇಲ್ಕಂಡಂತೆ ಮೆ: ಪ್ರದೀಪ ಕನ್‌ಸ್ಟ್ರಕ್ಷನ್ ಕಂಪೆನಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳನ್ನು ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 15.47 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 08–02–2012ರ ಪತ್ರದಲ್ಲಿ ಕಾಮಗಾರಿಯ ಸುತ್ತಮುತ್ತಲೂ ಇರುವ ಭಾರೀ ನೀರಾವರಿ ಯೋಜನೆ ನಾಲೆಗಳಿಗೆ ನಿರಂತರವಾಗಿ ನೀರು ಹರಿದುಬರುವುದರಿಂದ, ಕಾಮಗಾರಿಯನ್ನು ರಿಂಗ್ ಬಂಡ್ ನಿರ್ಮಿಸಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ ತಾವು ನಮೂದಿಸಿರುವ ದರಗಳನ್ನು ಕಡಿಮೆಗೊಳಿಸಿ ಪರಿಷ್ಕೃತ ಟೆಂಡರಿಗಿಟ್ಟ ಮೊತ್ತದ ಮೇಲೆ ಕನಿಷ್ಟ ಶೇ. 15.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಸಹಮತಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,56,76,184/– ಗಳ ಮೇಲೆ ಶೇ. 14.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,80,11,935/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 17 ಅಪಿಬಂ 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬೆಳಗಾವಿ ಜಿಲ್ಲೆ ಸವದತ್ತಿ ತಾಲ್ಲೂಕಿನ ಬಸರಗಿ ಗ್ರಾಮದ ಹತ್ತಿರ ಮಲ್ಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,56,76,184/–ಗಳ ಮೇಲೆ ಶೇ. 14.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,80,11,935/–ಗಳಿಗೆ (ರೂ. ಒಂದು ಕೋಟಿ ಎಂಭತ್ತು ಲಕ್ಷ ಹನ್ನೊಂದು ಸಾವಿರದ ಒಂಭೈನೂರ ಮೂವತ್ತೈದು ಮಾತ್ರ)ಗಳಿಗೆ ಮೆ: ಪ್ರದೀಪ ಕನ್‌ಸ್ಟ್ರಕ್ಷನ್ ಕಂಪೆನಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 747

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಉಡೇಗೋಳಂ-3 ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ (ಬಾಕಿ ಕಾಮಗಾರಿ) ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 42 ನಯೋಕಾ 2005 ದಿನಾಂಕ: 09-12-2005.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-12/2011-12/271 ದಿನಾಂಕ: 18-01-2012.

3. ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2010, ದಿನಾಂಕ: 27-11-2010.

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಉಡೇಗೋಳಂ-3 ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಉಲ್ಲೇಖ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್‌ನ ಆರ್.ಐ.ಡಿ.ಎಫ್.-16ಡಿ ಕೈಗೊಳ್ಳಲು (ಬಾಕಿ ಕಾಮಗಾರಿ ಅಂದಾಜಿಗೆ) ಅನುಮೋದನೆ ನೀಡಲಾಗಿದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಬಾಕಿ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 02-05-2011 |
| ಪ್ರಜಾವಾಣಿ ದಿನ ಪತ್ರಿಕೆ | 29-04-2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 17-06-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 60,16,457/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,09,87,116/- |

| ಕ್ರಮ ಸಂಖ್ಯೆ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎಂ. ಸಿದ್ದರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು | 1,50,75,667/- | 150.57 ಹೆಚ್ಚು | 37.21 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಂ. ಸಿದ್ಧರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 37.21 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 25-01-2012ರ ಪತ್ರದಲ್ಲಿ ಕಾಮಗಾರಿಗೆ ಅಗತ್ಯವಿರುವ ಕಚ್ಚಾ ಸಾಮಗ್ರಿಗಳ ಬೆಲೆಗಳಲ್ಲಿ ಹಾಗೂ ಕೂಲಿ ಕಾರ್ಮಿಕರ ಭತ್ಯೆಗಳಲ್ಲಿ ಸಾಕಷ್ಟು ಹೆಚ್ಚಳವಾಗಿರುವುದಾಗಿ ತಿಳಿಸುತ್ತಾ ತಾವು ನಮೂದಿಸಿರುವ ದರಗಳನ್ನು ಕಡಿಮೆಗೊಳಿಸಿ ಪರಿಷ್ಕೃತ ಟೆಂಡರಿಗಿಟ್ಟ ಮೊತ್ತದ ಮೇಲೆ ಕನಿಷ್ಟ ಶೇ. 18.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಸಹಮತಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,09,87,116/-ಗಳ ಮೇಲೆ ಶೇ. 14.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,26,24,196/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ಏನೀಯೋ 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಉಡೇಗೋಳು-3 ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,09,87,116/-ಗಳ ಮೇಲೆ ಶೇ. 14.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,26,24,196/-ಗಳಿಗೆ (ರೂ. ಒಂದು ಕೋಟಿ ಇಪ್ಪತ್ತಾರು ಲಕ್ಷ ಇಪ್ಪತ್ತ ನಾಲ್ಕು ಸಾವಿರದ

ಒಂದು ನೂರ ತೊಂಭತ್ತಾರು ಮಾತ್ರ)ಗಳಿಗೆ ಶ್ರೀ ಎಂ. ಸಿದ್ದರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 748 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಗೋಡಿಹಾಳ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮುಸಾವಿ 2010 ದಿನಾಂಕ: 28–09–2011.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–9/ಗೋಡಿಹಾಳ ಸ.ನೀ.ಕೆರೆ ಸುಧಾರಣೆ 2011–12/554 ದಿನಾಂಕ: 01–02–20112.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಗೋಡಿಹಾಳ ಹತ್ತಿರ ಸಣ್ಣ ನೀರಾವರಿ ಕೆರೆ ಯೋಜನೆ ಸುಧಾರಣೆ ಕಾಮಗಾರಿಯು 13ನೇ ಹಣಕಾಸು ಆಯೋಗದ ಅನುದಾನದಡಿ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀನವ ಯೋಜನೆಯಡಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳ 2011–12ನೇ ಸಾಲಿನ ಕ್ರಿಯಾ ಯೋಜನೆಯ ಪಟ್ಟಿಯಲ್ಲಿ ಸೇರಿರುತ್ತದೆ. ಈ ಕಾಮಗಾರಿಯ ರೂ. 85.20 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 13–12–2011 |
| ಪ್ರಜಾವಾಣಿ ಕನ್ನಡ ದಿನ ಪತ್ರಿಕೆ | 06–12–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 23–01–2012 ರಂದು ತೆರೆದು ಪರಿಶೀಲಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 78,05,598/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| 1 | ಎಚ್.ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು | 89,58,804/0 | 14.775 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಚ್.ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.775 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 78,05,598/–ಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 85,08,102/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 08 ಕೆಜಿದು 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಗೋಡಿಹಾಳ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 78,05,598/–ಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 85,08,102/–ಗಳಿಗೆ (ರೂ. ಎಂಬತ್ತೈದು ಲಕ್ಷ ಎಂಟು ಸಾವಿರದ ಒಂದು ನೂರ ಎರಡು

ಮಾತ್ರ)ಗಳಿಗೆ ಶ್ರೀ ಎಚ್.ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 749

## ಕಂದಾಯ ಸಚಿವಾಲಯ

**ವಿಷಯ :** ಮಾನ್ಯ ಉಚ್ಚನ್ಯಾಯಾಲಯದಲ್ಲಿ ಸರ್ಕಾರವು ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 39634/2004 ಹಾಗೂ ಇತರೆ ಅರ್ಜಿಗಳ ಕುರಿತು ನ್ಯಾಯಾಲಯವು ದಿನಾಂಕ: 14–12–2010 ರಂದು ನೀಡಿರುವ ಆದೇಶದಂತೆ ಮಾಜಿ ಶಾನುಭೋಗರುಗಳಿಗೆ ಪಿಂಚಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 182 ಎಂವಿಎಸ್ 77, ದಿನಾಂಕ: 28–11–1979.
**2.** ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 125 ಎಂವಿಎಸ್ 89, ದಿನಾಂಕ: 20–07–1991.
**3.** ಸರ್ಕಾರದ ಆದೇಶ ಸಂಖ್ಯೆ: ಕಂಇ 63 ಬಿಎಸ್‌ಸಿ 2006, ದಿನಾಂಕ: 03–08–2010.

**ಪ್ರಸ್ತಾವನೆ:–**

ಕರ್ನಾಟಕ ಗ್ರಾಮಾಧಿಕಾರಿಗಳ ರದ್ಧತಿ ಕಾಯ್ದೆ 1961 ದಿನಾಂಕ: 01–02–1963 ರಿಂದ ಜಾರಿಗೆ ಬಂದಿರುತ್ತದೆ. ಆ ದಿನಾಂಕದಿಂದ ರಾಜ್ಯದಲ್ಲಿ ಹಿಂದೆ ಅಸ್ತಿತ್ವದಲ್ಲಿದ್ದ ಅನುವಂಶಿಕ ಹುದ್ದೆಗಳಾದ ಪಟೇಲರು, ಶಾನುಭೋಗರು, ಕುಲಕರ್ಣಿಗಳು ಮತ್ತು ಕೆಳಮಟ್ಟದ ಗ್ರಾಮನೌಕರರ ಹುದ್ದೆಗಳನ್ನು ರದ್ದುಗೊಳಿಸಲಾಗಿದೆ. 1964ರ ಭೂಕಂದಾಯ ಕಾಯ್ದೆಯ ಕಲಂ: 16(1) ರಡಿಯಲ್ಲಿ ಜಿಲ್ಲಾಧಿಕಾರಿಗಳು ಗ್ರಾಮಲೆಕ್ಕಿಗರನ್ನು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ. ಸದರಿ ಕಾಯ್ದೆಯ ಕಲಂ: 16(2) ರನ್ವಯ ಶಾನುಭೋಗರ ಸ್ಥಾನದಲ್ಲಿ ಸೃಜಿಸಲಾದ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬಿಕೊಳ್ಳುವವರೆಗೆ ಹಾಲಿ ಕರ್ತವ್ಯ ನಿರ್ವಹಿಸುತ್ತಿದ್ದ, ಅರ್ಹತೆಯುಳ್ಳ ಶಾನುಭೋಗರುಗಳನ್ನು ಸೇವೆಯಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಲಾಗಿತ್ತು. ನೇರ ನೇಮಕಾತಿಯಲ್ಲಿ ನೇಮಕಗೊಂಡ ಗ್ರಾಮಲೆಕ್ಕಿಗರು ಹುದ್ದೆಗೆ ಹಾಜರಾದ ನಂತರ ಅಲ್ಲಿಯವರೆಗೆ ಕಾರ್ಯ ನಿರ್ವಹಿಸುತ್ತಿದ್ದ ಮಾಜಿ ಶಾನುಭೋಗರುಗಳನ್ನು ಸೇವೆಯಿಂದ ತೆಗೆದು ಹಾಕಲಾಗಿತ್ತು. ಈ ರೀತಿ ಸೇವೆಯಿಂದ ತೆಗೆದುಹಾಕಲ್ಪಟ್ಟ ಕೆಲವು ಶಾನುಭೋಗರುಗಳು ನ್ಯಾಯಾಲಯದಿಂದ ತಡೆಯಾಜ್ಞೆ ತಂದು ಸೇವೆಯಲ್ಲಿ ಮುಂದುವರೆದು ನಿವೃತ್ತಿ ವಯೋಮಿತಿ ತಲುಪಿ ಸೇವೆಯಿಂದ ಬಿಡುಗಡೆ ಹೊಂದಿರುತ್ತಾರೆ. ಇಂತಹ ಮಾಜಿ ಶಾನುಭೋಗರುಗಳು ಉಚ್ಚನ್ಯಾಯಾಲಯದಲ್ಲಿ ಸಲ್ಲಿಸಿದ್ದ ಅರ್ಜಿಯ ವಿಚಾರಣೆ ನಡೆದ ಸಮಯದಲ್ಲಿ ನ್ಯಾಯಾಲಯವು ನೀಡಿದ್ದ ಸಲಹೆಯಂತೆ ಅವರುಗಳಿಗೆ ರೂ. 500/– ರಂತೆ ಮಾಸಾಶನ ಮಂಜೂರು ಮಾಡಿ ಅದರ ಜೊತೆಗೆ ಡಿ.ಸಿಆರ್.ಜಿ. ಮೊತ್ತವಾಗಿ ಪ್ರತಿಯೊಬ್ಬರಿಗೆ ರೂ. 2000/– ಗಳನ್ನು ಒಟ್ಟು ಮೊತ್ತವಾಗಿ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ನೀಡಲಾಗಿರುತ್ತದೆ.

ಈ ಮಧ್ಯೆ ನಿವೃತ್ತಿ ವೇತನವನ್ನು ಕೋರಿ ಮಾಜಿ ಶಾನುಭೋಗರುಗಳು ಕೆ.ಎ.ಟಿ. ಯಲ್ಲಿ ದಾಖಲಿಸಿದ್ದ ಅರ್ಜಿ ಸಂಖ್ಯೆ: 1108–1112/1998ರ ಕುರಿತು ನ್ಯಾಯಮಂಡಳಿಯು ದಿನಾಂಕ: 24–09–2003ರಂದು ನೀಡಿದ ಆದೇಶದ ಮೇಲೆ ಸರ್ಕಾರವು ಮಾನ್ಯ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 39634/2004ನ್ನು ಸಲ್ಲಿಸಿದ್ದು, ಸದರಿ ಅರ್ಜಿಯ ಮಧ್ಯಂತರ ತೀರ್ಪಿನಲ್ಲಿ ನೀಡಿದ ನಿರ್ದೇಶನದಂತೆ, ಮಾಜಿ ಶಾನುಭೋಗರುಗಳಿಗೆ ಮಾಸಿಕ ಗೌರವಧನವನ್ನು ದಿನಾಂಕ: 01–11–2008 ರಿಂದ ಜಾರಿಗೆ ಬರುವಂತೆ ರೂ. 500/– ರಿಂದ ರೂ. 1000/– ಗಳಿಗೆ ಹೆಚ್ಚಿಸಿ, ಮತ್ತು ದಿನಾಂಕ: 01–02–1963 ರಿಂದ ಜಾರಿಗೆ ಬಂದ ಕರ್ನಾಟಕ ಗ್ರಾಮಾಧಿಕಾರಿಗಳ ರದ್ಧತಿ ಕಾಯ್ದೆಯ ನಂತರ ಸೇವೆಯಲ್ಲಿ ಮುಂದುವರೆದು ಕಾರ್ಯನಿರ್ವಹಿಸಿ ನಿವೃತ್ತಿ ವೇತನ ಪಡೆಯದ ಮಾಜಿ ಶಾನುಭೋಗರುಗಳಿಗೆ ಅವರು ನಿರ್ವಹಿಸಿದ ಪ್ರತಿ ವರ್ಷದ ಸೇವೆಗೆ ರೂ. 3000/– ಗಳಂತೆ ಅನುಗ್ರಹ ಕೊಡುಗೆಯನ್ನು ಮಂಜೂರು ಮಾಡಿ ಮೇಲೆ ಓದಲಾದ ಕ್ರಸಂ. (3)ರಂತೆ ಆದೇಶವನ್ನು ಹೊರಡಿಸಲಾಗಿದೆ. ನಂತರ ವಿಚಾರಣೆಯನ್ನು ಮುಂದುವರೆಸಿದ ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ: 14–12–2010 ರಂದು ಅಂತಿಮ ತೀರ್ಪು ನೀಡಿರುತ್ತದೆ. ತೀರ್ಪಿನ ಪ್ರಮುಖ ಅಂಶಗಳು ಈ ಕೆಳಕಂಡಂತಿವೆ:–

(b) The Ex-Shanbhogues are entitled to pension under the Government order dated 28-11-1979. The State is Directed to fix and pay the pension in terms of the Government Order dated 28-11-1979 as well as the impugned order passed by the Karnataka Administrative. Tribunal within six months from the date of the receipt of the copy of this order without fail.

(c) Till the pension is fixed in terms of the Government Order dated 28-11-1979 the petitioner-State is directed to:

(i) Pay honorarium at the rate of Rs. 1000/- From 01-11-2008 up to date. Within 3 months. As agreed as per the subsequent Government Order.

(ii) Pay ex-gratia payment at the rate of Rs. 3,000/- per year from the date of retirement or termination of service under Section 16(1) of the KLR Act. Within 3 months, as agreed as per the subsequent Government Order.

(iii) The amount paid as honorarium and ex-gratia payment shall be deducted from out of the arrears of the pension payable according to rules and only the balance amount of arrears of pension is payable to the Shanbogues.

ಮೇಲೆ ಓದಲಾದ (1)ರ ದಿನಾಂಕ: 28–11–1979ರ ಆದೇಶದಲ್ಲಿ ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಮೂಲಕ ವಿಲೀನಗೊಂಡ ಮಾಜಿ ಶಾನುಭೋಗರಿಗೆ ನೀಡಬೇಕಾದ ನಿವೃತ್ತಿ ವೇತನದ ಕುರಿತು ನಿಬಂಧನೆಗಳನ್ನು ನಿಗಧಿಪಡಿಸಿ ಅದರಂತೆ ಕ್ರಮವಹಿಸಲು ಆದೇಶ ನೀಡಲಾಗಿರುತ್ತದೆ. ಆದರೆ, ಗ್ರಾಮಲೆಕ್ಕಿಗರ ಹುದ್ದೆಯಲ್ಲಿ ವಿಲೀನಗೊಳ್ಳದೇ ರದ್ಧತಿ ಕಾಯ್ದೆ ಜಾರಿಗೆ ಬಂದ ನಂತರದಲ್ಲಿ ಸೇವೆಯಲ್ಲಿ ಮುಂದುವರೆದ ಮಾಜಿ ಶಾನುಭೋಗರುಗಳಿಗೆ ಮಾನ್ಯ ಉಚ್ಚನ್ಯಾಯಾಲಯದ ದಿನಾಂಕ: 14–12–2010ರ ಆದೇಶದಂತೆ ಪಿಂಚಣಿ ನೀಡಬೇಕಾಗಿರುವ ಅನಿವಾರ್ಯತೆ ಮತ್ತು ವಿಶೇಷ ಸಂದರ್ಭವನ್ನು ಪರಿಗಣಿಸಿ, ಈ ಪ್ರಕರಣವನ್ನು ಬೇರೆ ಯಾವುದೇ ಪ್ರಕರಣಗಳಿಗೆ ಪೂರ್ವ ನಿದರ್ಶನವಾಗಿ ಪರಿಗಣಿಸಬಾರದೆಂಬ ಷರತ್ತಿಗೊಳಪಡಿಸಿ,

ಮಾಜಿ ಶಾನುಭೋಗರುಗಳಿಗೆ ನಿವೃತ್ತಿ ವೇತನವನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 124 ಬಿಎಸ್‌ಸಿ 2011 ಬೆಂಗಳೂರು, ದಿನಾಂಕ : 02ನೇ ಮಾರ್ಚ್ 2012.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ: 01–02–1963 ರಿಂದ ಜಾರಿಗೆ ಬಂದ ಕರ್ನಾಟಕ ಗ್ರಾಮಾಧಿಕಾರಿಗಳ ರದ್ಧತಿ ಕಾಯ್ದೆ 1961ರ ನಂತರ ತಾತ್ಕಾಲಿಕವಾಗಿ ಸೇವೆಯಲ್ಲಿ ಮುಂದುವರೆದ ಮತ್ತು ಹೀಗೆ ಮುಂದುವರೆದು ನಿವೃತ್ತಿ ವಯೋಮಿತಿ ತಲುಪಿ, ಪಿಂಚಣಿಯನ್ನು ಪಡೆಯದೆ ಸೇವೆಯಿಂದ ಬಿಡುಗಡೆ ಹೊಂದಿದ ಮಾಜಿ ಶಾನುಭೋಗರುಗಳಿಗೆ ಪಿಂಚಣಿ ನೀಡುವ ವಿಷಯವನ್ನು ವಿಶೇಷ ಸಂದರ್ಭವೆಂದು ಪರಿಗಣಿಸಿ ಹಾಗೂ ಇದನ್ನು ಇತರೆ ಪ್ರಕರಣಗಳಿಗೆ ಪೂರ್ವ ನಿದರ್ಶನವೆಂದು ಪರಿಗಣಿಸಬಾರದೆಂಬ ಷರತ್ತಿಗೊಳಪಟ್ಟು ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ: 14–12–2010ರ ಆದೇಶದಲ್ಲಿ ನಿರ್ದೇಶಿಸಿರುವಂತೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 182 ಎಂವಿಎಸ್ 77, ದಿನಾಂಕ: 28–11–1979 ರಲ್ಲಿನ ನಿಬಂಧನೆಗಳ ವಿಧಿ ವಿಧಾನಗಳನ್ನು ಅನುಸರಿಸಿ ನಿವೃತ್ತಿ ವೇತನವನ್ನು ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ರೀತಿ ಮಂಜೂರು ಮಾಡಲಾದ ನಿವೃತ್ತಿ ವೇತನದಲ್ಲಿ ಈ ಹಿಂದೆ ಆದೇಶ ಸಂಖ್ಯೆ: ಆರ್‌ಡಿ 125 ಎಂವಿಎಸ್ 89, ದಿನಾಂಕ: 20–07–1991 ಮತ್ತು ಆರ್‌ಡಿ 63 ಬಿಎಸ್‌ಸಿ 2006, ದಿನಾಂಕ: 03–08–2010ರಲ್ಲಿ ಈಗಾಗಲೇ ನೀಡಲಾಗಿರುವ ಮಾಸಿಕ ಗೌರವಧನ ಮತ್ತು ಎಕ್ಸ್‌ಗ್ರೇಷಿಯಾ ಇನ್ನಿತರ ಮೊತ್ತಗಳನ್ನು ಕಡಿತಗೊಳಿಸಿ ನಿವೃತ್ತಿ ವೇತನವನ್ನು ನಿಗಧಿಪಡಿಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 1021 ವೆಚ್ಚ–7/2011, ದಿನಾಂಕ: 07–02–2012 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 755 ಕಂದಾಯ ಇಲಾಖೆ (ವಿ.ನಿ. ಮತ್ತು ಸೇ–2)

## ಸಹಕಾರ ಸಚಿವಾಲಯ

**ವಿಷಯ :** 2011–12ನೇ ವರ್ಷದಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಲೆಕ್ಕ ಶೀರ್ಷಿಕೆ '2425–ಸಹಕಾರ–101 (ಯೋಜನೇತರ)ರ ಉಪ ಲೆಕ್ಕ ಶೀರ್ಷಿಕೆ "071–ಕಟ್ಟಡ ವೆಚ್ಚ"ಕ್ಕೆ ಹೆಚ್ಚಿನ ಅನುದಾನದ ಪುನರ್‌ವಿನಿಯೋಗ ಕುರಿತು.

**ಓದಲಾಗಿದೆ :** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಪತ್ರ ಸಂ.ಲೆಕ್ಕ/ಬಿಯುಡಿ/ಅಮುವಿ/8/2011–12, ದಿನಾಂಕ: 01–02–2012.

**ಪ್ರಸ್ತಾವನೆ :**

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ 2011–12ನೇ ಸಾಲಿನಲ್ಲಿ ಉಪ ಲೆಕ್ಕ ಶೀರ್ಷಿಕೆ "071–ಕಟ್ಟಡ ವೆಚ್ಚ" ದಡಿಯಲ್ಲಿ ಒದಗಿಸಿರುವ ರೂ. 58.88 ಲಕ್ಷ ಅನುದಾನದಿಂದ ಸದರಿ ಇಲಾಖೆಯ ರಾಜ್ಯದಲ್ಲಿರುವ ವಿವಿಧ ಕಛೇರಿಗಳ ಬಾಡಿಗೆಯನ್ನು, ಪ್ರಸ್ತುತ ಆರ್ಥಿಕ ವರ್ಷದಲ್ಲಿ ಉಳಿದಿರುವ ಅವಧಿಗೆ ಪಾವತಿಸಲು ಕೊರತೆಯಿರುವುದರಿಂದ ಉಪ ಲೆಕ್ಕ ಶೀರ್ಷಿಕೆ "041–ಪ್ರಯಾಣ ವೆಚ್ಚ"ಕ್ಕೆ ಮಂಜೂರಾದ ರೂ. 169.00 ಲಕ್ಷ ಅನುದಾನದಲ್ಲಿ ರೂ. 15.00 ಲಕ್ಷ ಉಳಿತಾಯವನ್ನು ನಿರೀಕ್ಷಿಸಿದ್ದು, ಸದರಿ ಉಪ ಲೆಕ್ಕ ಶೀರ್ಷಿಕೆಯಿಂದ ಪುನರ್‌ವಿನಿಯೋಗ ಮಾಡಿಕೊಳ್ಳಲು ಮೇಲೆ ಓದಲಾದ ಪತ್ರವನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಕೋರಿರುತ್ತಾರೆ. ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಸಇ 26 ಸಿಎಲ್‌ಎಂ 2012 ಬೆಂಗಳೂರು, ದಿನಾಂಕ : 03ನೇ ಮಾರ್ಚ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '2425–ಸಹಕಾರ–101–ಸಹಕಾರ ಸಂಘಗಳ ಲೆಕ್ಕಪರಿಶೋಧನೆ–01 (ಯೋಜನೇತರ)' ರ ಉಪ ಲೆಕ್ಕ ಶೀರ್ಷಿಕೆ "071–ಕಟ್ಟಡದ ವೆಚ್ಚ" ರಡಿಯಲ್ಲಿ ಉಂಟಾಗಿರುವ ಅನುದಾನದ ಕೊರತೆಯನ್ನು ಉಪ ಲೆಕ್ಕ ಶೀರ್ಷಿಕೆ "041–ಪ್ರಯಾಣ ವೆಚ್ಚ"ರಡಿಯಲ್ಲಿ ವರ್ಷಾಂತ್ಯಕ್ಕೆ ಉಳಿಯಬಹುದಾದ ರೂ. 15.00 ಲಕ್ಷ ಅನುದಾನವನ್ನು ಪುನರ್‌ವಿನಿಯೋಗ ಮಾಡಿಕೊಳ್ಳುವ ಮೂಲಕ ಸರಿದೂಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ/2/ಟಿಎಫ್‌ಪಿ/2010, ದಿನಾಂಕ: 30–04–2010 ರನ್ವಯ ಇಲಾಖೆಯ ಕಾರ್ಯದರ್ಶಿ ಅವರಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಈ ಅದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಸತೀಶ್**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

ಪ್ರಪತ್ರ 22ಎ – ಕೆ.ಎಫ್.ಸಿ. (ಅನುಚ್ಛೇದ 308) ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ

ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಣ ಹಂಚಿಕೆ (ಅಲಾಟ್‌ಮೆಂಟ್)ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿನಿಯೋಗದ ವಿವರಣೆ

| ಮುಂಗಡ ಪತ್ರದ ಪ್ರಧಾನ ಲೆಕ್ಕ ಉಪ ಮತ್ತು ವಿವರವಾದ ಶೀರ್ಷಿಕೆಗಳು | ಹೆಚ್ಚಿಸಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ | | | | ಷರಾ |
|---|---|---|---|---|---|---|---|---|---|
| | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್‌ಮೆಂಟ್ ವಿವರ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿಯೋಗಕ್ಕೆ ಲಭ್ಯವಿರುವ ಮೊತ್ತ | ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಇಲ್ಲಿ ಪೂರ್ಣವಾಗಿ ವಿವರಿಸಬೇಕು |
| 1 | 2 | 3 | 4 | 5 | 6 | 7 | 8 | 9 | 10 |
| 2425–ಸಹಕಾರ–101–ಸಹಕಾರ ಸಂಘಗಳ ಲೆಕ್ಕಪರಿಶೋಧನೆ–01 (ಯೋಜನೇತರ) 071–ಕಟ್ಟಡ ವೆಚ್ಚ | 5888000 | 5816669 | 1571331 | 1500000 | | | | | 2011–12ನೇ ವರ್ಷದಲ್ಲಿ ಇಲಾಖೆಗೆ ಕಟ್ಟಡ ವೆಚ್ಚ ಶೀರ್ಷಿಕೆಯಡಿ ರೂ.58.88 ಲಕ್ಷ ಅನುದಾನ ಒದಗಿಸಲಾಗಿದೆ. ಈ ಅನುದಾನವು ಇಲಾಖೆಯ ಕಛೇರಿಗಳ ಬಾಡಿಗೆ/ ವಿದ್ಯುತ್/ನೀರಿನ ವೆಚ್ಚವನ್ನು ಭರಿಸಲು ಸಾಲದೆ ಬರುತ್ತದೆ. ಇಲಾಖೆಯಲ್ಲಿನ 159 ಕಛೇರಿಗಳ 2 ತಿಂಗಳ ಬಾಡಿಗೆ ಪಾವತಿಸಲು ಬಾಕಿ ಇರುತ್ತದೆ. ಅಲ್ಲದೆ ವರ್ಷದ ಉಳಿದ ಅವಧಿಯ ವಿದ್ಯುತ್/ನೀರು ವೆಚ್ಚ ಭರಿಸಬೇಕಿರುತ್ತದೆ. ಅನುದಾನದ ಕೊರತೆಯಿಂದ ಇದು ಸಾಧ್ಯವಿಲ್ಲವಾದ್ದರಿಂದ ಪುನರ್ ವಿನಿಯೋಗದ ಮೂಲಕ ಹೆಚ್ಚಿನ ಬೇಡಿಕೆ ಇತ್ಯರ್ಥ ಪಡಿಸಲುಉದ್ದೇಶಿಸಲಾಗಿದೆ. |
| | 5888000 | 5816669 | 1571331 | 1500000 | | | | | |
| 2425–ಸಹಕಾರ–101–ಸಹಕಾರ ಸಂಘಗಳ ಲೆಕ್ಕಪರಿಶೋಧನೆ–01 (ಯೋಜನೇತರ) 041–ಪ್ರಯಾಣ ವೆಚ್ಚ | | | | | 16900000 | 12285000 | 3115000 | 1500000 | 2011–12ನೇ ವರ್ಷದಲ್ಲಿ ಇಲಾಖೆಗೆ "041–ಪ್ರಯಾಣ ವೆಚ್ಚ" ಶೀರ್ಷಿಕೆ ಯಡಿ ರೂ. 169.00 ಲಕ್ಷ ಅನುದಾನವನ್ನು ಒದಗಿಸಲಾಗಿದೆ. ತಹಲ್‌ವರೆವಿಗೆ ಈ ಶೀರ್ಷಿಕೆಯಡಿ ಬಾಕಿ ಪ್ರಯಾಣ ಭತ್ಯೆ ಬಿಲ್‌ಗಳ ಇತ್ಯರ್ಥಕ್ಕಾಗಿ ರೂ. 122.84 ಲಕ್ಷ ಅನುದಾನ ಹಂಚಿಕೆ ಮಾಡಲಾಗಿದ್ದು. ರೂ. 46.15 ಲಕ್ಷ ಹಂಚಿಕೆಗೆ ಲಭ್ಯವಿರುತ್ತದೆ. ಈ ಶೀರ್ಷಿಕೆ ಯಡಿ ವರ್ಷಾಂತ್ಯಕ್ಕೆ ರೂ. 15.00 ಲಕ್ಷ ಉಳಿತಾಯ |

| | | | | | | | | | |
|---|---|---|---|---|---|---|---|---|---|
| | | | | | | | | | ವಾಗುವ ಸಾಧ್ಯತೆ ಇರುತ್ತದೆ. ಈ ಉಳಿತಾಯದಿಂದ ಕಟ್ಟಡ ವೆಚ್ಚಕ್ಕಾಗಿ ರೂ. 15.00 ಲಕ್ಷ ಅನುದಾನ ಪುನರ್‌ವಿನಿಯೋಗ ಮಾಡಿ ಕೊಳ್ಳಲು ಉದ್ದೇಶಿಸಲಾಗಿದೆ. |
| | | | **ಒಟ್ಟು** | | **16900000** | **12285000** | **3115000** | **1500000** | |

ಸ್ಥಳ: ಬೆಂಗಳೂರು
ದಿನಾಂಕ: 01–2012

**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 756

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 8.4 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್, ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 204 ಎನ್‌ಸಿಇ 2009 ದಿನಾಂಕ:: 20–05–2010
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2011 ದಿನಾಂಕ:: 06–04–2011
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ KRED/08/GAIL-8.4 MW SISL/2012, 184 ದಿನಾಂಕ: 17/19–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ರವರಿಗೆ ರಾಯಚೂರು, ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 250.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಮಾಡಲಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಅಂಶಿಕ ಸಾಮರ್ಥ್ಯವಾದ 3.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 16.8 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 8.4 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31–03–2012 ರೊಳಗೆ ಅನುಷ್ಠಾನಗೊಳಿಸಲಾಗುವುದೆಂದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 32 ಎನ್‌ಸಿಇ 2012 ಬೆಂಗಳೂರು, ದಿನಾಂಕ : 29ನೇ ಫೆಬ್ರವರಿ 2012**

ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಬ್ಯಾಡಗಿ ಮತ್ತು ಹಾವೇರಿ ತಾಲ್ಲೂಕುಗಳ ಬ್ಯಾಡಗಿ ಮತ್ತು ಕದರಮಂಡಲಗಿ ಗ್ರಾಮಗಳಲ್ಲಿ ಅನುಮತಿಸಲಾದ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 8.4 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ:–

**Land Details of the Project**

| Village Name | Taluk/ District | MW | Land Survey Number | No. of WTGS | Extent in Land (Acres) | WTG Number | Latitude, Langitude and Ridge Peaks |
|---|---|---|---|---|---|---|---|
| Byadagi | Byadagi/ Haveri | 2.1 | 171/A | 1 No. | 2 Acres per WTG | SD-32 | Lat: $14^0$39'21.5'"N<br>Long: $75^0$29'30.9'' -E<br>Ridge peaks : 665 m |
| Byadagi | Byadagi/ Haveri | 2.1 | 171/A | 1 No. | 2 Acres per WTG | SD-34 | Lat: $14^0$39'16.1'"N<br>Long: $75^0$29'36.'' E<br>Ridge peaks : 685 m |

| | | | | | | | |
|---|---|---|---|---|---|---|---|
| Byadagi | Byadagi/ Haveri | 2.1 | 171/A | 1 No. | 2 Acres per WTG | SD-35 | Lat: 14°39'09.7'''N<br>Long: 75°29'40.9'' E<br>Ridge peaks : 686 m |
| Kadarma ndalgi | Byadagi/ Haveri | 2.1 | 327 | 1 No. | 2 Acres per WTG | SD-36 | Lat: 14°39'2.9'' N<br>Long: 75°29'46.4'' E<br>Ridge peaks : 681 m |
| | | 8.4 | | 4 Nos | 8 Acres | | |

1. **ಮೆ: ಗೈಲ್ (ಇಂಡಿಯಾ) ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ: ಗೈಲ್ (ಇಂಡಿಯಾ) ಲಿಮಿಟೆಡ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ **31–03–2012** ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ಈ ಕುರಿತಂತೆ ಅಭಿವೃದ್ಧಿದಾರರಿಂದ ಕ್ರೆಡಲ್ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 757

## ಇಂಧನ ಸಚಿವಾಲಯ

**ವಿಷಯ :** ಮೆ: ಜಿ.ಎಸ್.ಎಸ್.ಎಮ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ಜಿ.ಎಸ್.ಎಸ್. ಎಮ್.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ ಮತ್ತು ಸದರಿ ಕಂಪನಿಗೆ ಹಂಚಿಕೆಯಾಗಿರುವ 1.3 ಮೆ.ವ್ಯಾ. ಸಾಮಾರ್ಥ್ಯದ ಮಾಚಲಗುಂಡಲ್ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 12 ಎನ್‌ಸಿಇ 2004 ದಿನಾಂಕ: 13–02–2004.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 139 ಎನ್‌ಸಿಇ 2007 ದಿನಾಂಕ: 01–06–2007.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2011 ದಿನಾಂಕ: 23–04–2011
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್.ಹೆಚ್–124/ಮಾಚಗುಂಡಲ್ ಎಂ.ಹೆಚ್.ಎಸ್/2011/3013 ದಿನಾಂಕ: 26–09–2011, ಮತ್ತು ಕೆಆರ್‌ಇಡಿ/06 /ಎಸ್.ಹೆಚ್–124/ಮಾಚಗುಂಡಲ್ ಕಿಜವಿಯೋ/ 2011/4399 ದಿನಾಂಕ: 24/25–11–2011.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ: ಜಿ.ಎಸ್.ಎಸ್.ಎಮ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ 1.3 ಮೆಗಾ ವ್ಯಾಟ್ ಸಾಮರ್ಥ್ಯದ ಮಾಚಲಗುಂಡಲ್ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಹಾಗೂ (3)ರ ಆದೇಶಗಳಲ್ಲಿ ಮೆ: ಜಿ.ಎಸ್.ಎಸ್.ಎಮ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮಾದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ ಹಂಚಿಕೆ ಮಾಡಿದ್ದ 1.3 ಮೆಗಾ ವ್ಯಾಟ್ ಸಾಮರ್ಥ್ಯದ ಮಾಚಲಗುಂಡಲ್ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲವಕಾಶವನ್ನು ಕ್ರಮವಾಗಿ ದಿನಾಂಕ: 01–06–2007 ರಿಂದ ಮುಂದಿನ 3 ವರ್ಷದ ಅವಧಿಗೆ ಮತ್ತು ದಿನಾಂಕ: 01–06–2010 ರಿಂದ 31–05–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರು ಮೆ: ಜಿ.ಎಸ್.ಎಸ್.ಎಮ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ಜಿ.ಎಸ್.ಎಸ್. ಎಮ್.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ ಮತ್ತು ಸದರಿ ಕಂಪನಿಗೆ ಹಂಚಿಕೆಯಾಗಿರುವ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಲಗುಂಡಲ್ ಕಿರು ಜಲ ವಿದ್ಯುತ್ ಯೋಜನೆಗೆ ಅಂತಿಮವಾಗಿ ಕಾಲಾವಕಾಶವನ್ನು ಪ್ರತಿ ಮೆಗಾ ವ್ಯಾಟ್‌ಗೆ 3 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ನೀಡತಕ್ಕದ್ದೆಂಬ ಷರತ್ತಿಗೊಳ್ಳಪಟ್ಟು ದಿನಾಂಕ: 01–06–2011 ರಿಂದ ದಿನಾಂಕ: 31–05–2013 ರವರೆಗೆ ವಿಸ್ತರಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 402 ಎನ್‌ಸಿಇ 2011 ಬೆಂಗಳೂರು, ದಿನಾಂಕ : 28ನೇ ಫೆಬ್ರವರಿ 2012**

ಮೆ: ಜಿ.ಎಸ್.ಎಸ್.ಎಮ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್, ಕಂಪನಿಯ ಹೆಸರನ್ನು ಮೆ: ಜಿ.ಎಸ್.ಎಸ್. ಎಮ್.ಆರ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಅನುಮತಿ ನೀಡಿದೆ. ಮತ್ತು ಈ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಮಾಚಲಗುಂಡಲ್ ಗ್ರಾಮದ ಬಳಿ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ–6 ರಲ್ಲಿ ಹಂಚಿಕೆಯಾಗಿರುವ 1.3 ಮೆ.ವ್ಯಾ. ಸಾಮರ್ಥ್ಯದ ಮಾಚಗುಂಡಲ್ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ **ಅಂತಿಮವಾಗಿ ಕಾಲಾವಕಾಶವನ್ನು ದಿನಾಂಕ: 01–06–2011 ರಿಂದ ದಿನಾಂಕ: 31–05–2013 ರವರೆಗೆ ಪ್ರತಿ ಮೆಗಾ ವ್ಯಾಟ್‌ಗೆ 3 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ನೀಡತಕ್ಕದ್ದೆಂಬ ಷರತ್ತಿಗೊಳ್ಪಪಟ್ಟು** ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 758

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 4.2 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ರಾಜಸ್ಥಾನ್ ಗಮ್ ಪ್ರೈ. ಲಿಮಿಟೆಡ್, ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 204 ಎನ್‌ಸಿಇ 2009 ದಿನಾಂಕ:: 20–05–2010
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2011 ದಿನಾಂಕ:: 06–04–2011
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ KRED/08/RGAPL-4.2 MW (SISL-16.80 MW/SD-23 & 24/2012/177 ದಿನಾಂಕ: 18/19–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ರವರಿಗೆ ರಾಯಚೂರು, ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 250.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಮಾಡಲಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಅಂಶಿಕ ಸಾಮರ್ಥ್ಯವಾದ 3.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 16.8 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 4.2 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ರಾಜಸ್ಥಾನ್ ಗಮ್ ಪ್ರೈ ಲಿಮಿಟೆಡ್, ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31–03–2012 ರೊಳಗೆ ಅನುಷ್ಠಾನಗೊಳಿಸಲಾಗುವುದೆಂದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 33 ಎನ್‌ಸಿಇ 2012, ಬೆಂಗಳೂರು, ದಿನಾಂಕ : 29ನೇ ಫೆಬ್ರವರಿ 2012**

ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಮತ್ತು ಬ್ಯಾಡಗಿ ಗ್ರಾಮಗಳಲ್ಲಿ ಅನುಮತಿಸಲಾದ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 4.2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ರಾಜಸ್ಥಾನ್ ಗಮ್ ಪ್ರೈ ಲಿಮಿಟೆಡ್, ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ:–

**Land Details of the Project**

| Village Name | Taluk/ District | MW | Land Survey Number | No. of WTGS | Extent in Land (Acres) | WTG Number | Latitude, Langitude and Ridge Peaks |
|---|---|---|---|---|---|---|---|
| Masanagi | Byadagi/ Haveri | 2.1 | 122 | 1 No. | 2 Acres per WTG | SD-24 | Lat: $14^0$39'39.6'' N<br>Long: $75^0$25'40.7'' -E<br>Ridge peaks : 665 m |

| | | | | | | | |
|---|---|---|---|---|---|---|---|
| Masanagi | Byadagi/ Haveri | 2.1 | 122 | 1 No. | 2 Acres per WTG | SD-23 | Lat: 14°39'45.5'''N<br>Long: 75°25'33.4.'' E<br>Ridge peaks : 665 m |
| | **Total** | **4.2** | | **2 Nos** | **4 Acres** | | |

1. **ಮೆ: ರಾಜಸ್ಥಾನ್ ಗಮ್ ಪ್ರೈ ಲಿಮಿಟೆಡ್,** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ: ರಾಜಸ್ಥಾನ್ ಗಮ್ ಪ್ರೈ ಲಿಮಿಟೆಡ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ **31–03–2012** ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ಈ ಕುರಿತಂತೆ ಅಭಿವೃದ್ಧಿದಾರರಿಂದ ಕ್ರೆಡಲ್ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ,

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 759

## ಇಂಧನ ಸಚಿವಾಲಯ

**ವಿಷಯ :** ಮೆ: ಫಾರ್ಚ್ಯುನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ರವರಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಂಚಿಕೆಯಾಗಿದ್ದ 12 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಗದಗ ಜಿಲ್ಲೆಗೆ ಸ್ಥಳ ಬದಲಾವಣೆ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 317 ಎನ್‌ಸಿಇ 2006 ದಿನಾಂಕ: 16–10–2006.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 570 ಎನ್‌ಸಿಇ 2009 ದಿನಾಂಕ: 25–11–2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: KRED/08/FFMEPL-12 MW/2011/2709 ದಿನಾಂಕ: 12/13–09–2011 ಮತ್ತು ದಿನಾಂಕ: 28–10/04–11–2011.
4. NTPCL ರವರ ಪತ್ರ ಸಂಖ್ಯೆ: 09/REP/04/559 ದಿನಾಂಕ: 20–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಫಾರ್ಚ್ಯುನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ 41.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 51 ಎನ್‌ಸಿಇ 2006 ದಿನಾಂಕ: 21–04–2006ರಲ್ಲಿ ಬಾಗಲಕೋಟೆ, ಕೊಪ್ಪಳ ಮತ್ತು ಗದಗ ಜಿಲ್ಲೆಗಳಲ್ಲಿ ಹಂಚಿಕೆ ಮಾಡಿದ್ದ ಒಟ್ಟು 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಿ, ಸದರಿ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಎನ್‌ಟಿಪಿಸಿ ಲಿಮಿಟೆಡ್ ರವರಿಗೆ ಹಂಚಿಕೆಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಸರ್ಕಾರಿ ಆದೇಶ (1) ರಲ್ಲಿಯ ಕ್ರಮ ಸಂಖ್ಯೆ (3) ಮತ್ತು (4) ರಲ್ಲಿ ಹಂಚಿಕೆಯಾದ 41.00 ಮೆ.ವ್ಯಾ. ಸಾಮರ್ಥ್ಯದ ಪೈಕಿ 12.00 ಮೆ.ವ್ಯಾ. ಸಾಮರ್ಥ್ಯದ ದಕ್ಷಿಣ ಕನ್ನಡ ಜಿಲ್ಲೆಯ ಕುಡುಪಾಡವು, ಸತ್ಯಸಲ್ಲಿಹಾರ್, ಮುಚ್ಚಪಡವು, ಮಲತಡಕ, ಕಲ್ಲಪಡವು ಮತ್ತು ಮುದಂಬೈಲಗುಡ್ಡ ಗ್ರಾಮಗಳಲ್ಲಿ ಗಾಳಿಯ ವೇಗವು ತೀರಾ ಕಡಿಮೆ ಇರುವುದರಿಂದ ಹಾಗೂ ಗಾಳಿಯ ಸಾಂದ್ರತೆ (WPD) 80 W/SQM ಕ್ಕಿಂತ ಕಡಿಮೆ ಇರುವುದರಿಂದ ಪವನ ವಿದ್ಯುತ್ ಯೋಜನೆಗೆ ಸೂಕ್ತವಲ್ಲವೆಂದು ಪರಿಗಣಿಸಿ, ಇದೇ ಸಾಮರ್ಥ್ಯವನ್ನು ಪವನ ವಿದ್ಯುತ್ ಯೋಜನೆಗೆ ಸೂಕ್ತ ಸ್ಥಳವಾದ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ನಾಗೇಂದ್ರಗಡ, ಅಮರಗಟ್ಟಿ, ಲಕ್ಕಲಕಟ್ಟಿ, ಕಲ್ಕೇಶ್ವರ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ಮೆ: ಫಾರ್ಚ್ಯುನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ರವರು ಸರ್ವೆ ನಂ. 261 ಮತ್ತು 262ರಲ್ಲಿ ಒಟ್ಟು 38.53 ಎಕರೆ ಖಾಸಗಿ ಜಮೀನನ್ನು ಖರೀದಿ ಮಾಡಿರುವುದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಮೇಲಿನ ಯೋಜನೆಯ ಸ್ಥಳ ಬದಲಾವಣೆ ಕೋರಿ ಹಾಗೂ ಅಭಿವೃದ್ಧಿದಾರರು ಬದಲಾವಣೆ ಕೇಳಿದ ಸ್ಥಳದಲ್ಲಿ ಮೆ: ಎನ್‌ಟಿಪಿಸಿ ರವರಿಗೆ 100.00 ಮೆ.ವ್ಯಾ. ಹಂಚಿಕೆಯಾದ ಸ್ಥಳದಲ್ಲಿ ಮೆ: ಫಾರ್ಚ್ಯುನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ರವರಿಗೆ ಪವನ ವಿದ್ಯುತ್ ಯೋಜನೆಗೆ ಮೆ: ಎನ್‌ಟಿಪಿಸಿ ಯವರು ನಿರಾಕ್ಷೇಪಣೆಯನ್ನು ನೀಡಿರುವುದನ್ನು ಮತ್ತು ಅಭಿವೃದ್ಧಿದಾರರು 2012–2013ರ ಅಂತ್ಯದೊಳಗಾಗಿ ಅನುಷ್ಠಾನಗೊಳಿಸುವುದಾಗಿ

ತಿಳಿಸಿರುವುದರ ಹಿನ್ನೆಲೆಯಲ್ಲಿ ಇಲ್ಲಿ ಉತ್ಪಾದನೆ ಆಗುವ ಪೂರ್ಣ ವಿದ್ಯುತ್‌ನ್ನು ಪಿ.ಪಿ.ಎ. ಮೂಲಕ ವಿದ್ಯುತ್ ಸರಬರಾಜು ಕಂಪನಿಗೆ ಮಾರಾಟ ಮಾಡುವುದರಿಂದ ವಿವರವಾದ ವರದಿಯೊಂದಿಗೆ ಸ್ಥಳ ಬದಲಾವಣೆಯ ಪ್ರಸ್ತಾವನೆಗೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 212 ಎನ್‌ಸಿಇ 2011 ಬೆಂಗಳೂರು, ದಿನಾಂಕ : 29ನೇ ಫೆಬ್ರವರಿ 2012**

ಮೆ: ಫಾರ್ಚ್ಯೂನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ರವರಿಗೆ ದಿನಾಂಕ 16–10–2006ರ ಸರ್ಕಾರಿ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ (8.00 ಮೆ.ವ್ಯಾ.+4.00 ಮೆ.ವ್ಯಾ.) ಒಟ್ಟು 12.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಗದಗ ಜಿಲ್ಲೆಯ ರೋಣ ತಾಲ್ಲೂಕಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಬದಲಾಯಿಸಲು ಅನುಮೋದನೆ ನೀಡಲಾಗಿದೆ:–

## Schedule – I

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| 1 | 48 M/13 | 12 MW | Nagendragarh, Amaragatti and Lakkalkatti and Kalkaleshwar in Gadag district (formerly Dharwad district) | The proposed area is a private land Near Malgathi and several villages Amaragatti, Lakkalakatti and Nagendragrah and Kalkaeshwar. And also peaks are covered 742, 737, 791 and 722. Further, the area covered in the following geographical co-ordinates:<br>Latitode : $15^0$45’46” - $15^0$48’06” N<br>Longitude : $75^0$52'45’’ $75^0$58’32” - E<br>Ridge peaks : 722, 748, 737, 769 and 791 Amsl. |
| | **Total** | **12.00 MW** | | |

1. **ಮೆ: ಫಾರ್ಚ್ಯೂನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ: ಫಾರ್ಚ್ಯೂನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ **2012–2013ರ ಅಂತ್ಯದೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು, ಮತ್ತು ಈ ಕುರಿತಂತೆ ಅಭಿವೃದ್ಧಿದಾರರಿಂದ ಕ್ರೆಡಲ್ ಒಪ್ಪಿಗೆ ಪತ್ರ ಪಡೆಯತಕ್ಕದ್ದು
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
5. **ಮೆ: ಫಾರ್ಚ್ಯೂನ್ ಫೈವ್ ಮಿನರಲ್ ಎಕ್ಸ್‌ಪೋರ್ಟ್ ಪ್ರೈವೇಟ್ ಲಿಮಿಟೆಡ್ ರವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಕುಡುಪಾಡವು, ಮುಂತಾದ ಸ್ಥಳಗಳಲ್ಲಿ ದಿನಾಂಕ: 16–10–2006ರ ಆದೇಶದ ಕ್ರಮ ಸಂಖ್ಯೆ: ಮತ್ತು 4ರಲ್ಲಿ ಮಂಜೂರಾಗಿರುವ (8 ಮೆಗಾ. ವ್ಯಾಟ್. + 4 ಮೆಗಾ. ವ್ಯಾಟ್) ಒಟ್ಟು 12 ಮೆಗಾ. ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸಲಾಗಿದೆ.**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 760

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್, ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 204 ಎನ್‌ಸಿಇ 2009, ದಿನಾಂಕ: 20–05–2010
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2011, ದಿನಾಂಕ: 06–04–2011.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GAIL-2.1MW (SD-25)SISL/2012–185, ದಿನಾಂಕ: 12/19–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ರವರಿಗೆ ರಾಯಚೂರು, ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 250.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಮಾಡಲಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಅಂಶಿಕ ಸಾಮರ್ಥ್ಯವಾದ 3.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 16.8 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಿರುವ 16.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31–03–2012ರೊಳಗೆ ಅನುಷ್ಠಾನಗೊಳಿಸಲಾಗುವುದೆಂದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 31 ಎನ್‌ಸಿಇ 2012, ಬೆಂಗಳೂರು, ದಿನಾಂಕ: 29–02–2012**

ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಮತ್ತು ಬ್ಯಾಡಗಿ ಗ್ರಾಮಗಳಲ್ಲಿ ಅನುಮತಿಸಲಾದ 16.8 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **2.1 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲು ಅನುಮೋದನೆ ನೀಡಲಾಗಿದೆ:–**

Land Details of the Project

| Village Name | Taluk/District | MW | Land Survey Number | No of WTGs | Extent in Land (Acres) | **WTG Number** | Latitude, Longitude and Ridge peaks |
|---|---|---|---|---|---|---|---|
| Masanagi | Byadagi/ Haveri | 2.1 | 141/A | 1 No. | 2 Acres Per WTG | SD-25 | The proposed area consists of independent NW-SE, oriented ridges located on South and Southeast of Byadagi Village, ridges having peaks and are held in the following geographical co-ordinates:<br><br>Latitude: 14⁰38'3" - 14⁰40'0"N<br>Longitude:75⁰25'0" - 75 ⁰30'15"E<br>Ridgepeaks:684,670,664,696,666,661 698m Amsl.<br><br>Toposheet No: 48 N/6 & N/10<br>LOC No: SD 25<br>Lat: 14⁰39'31.9"N<br>Long: 75⁰25'46.5" E<br>Ridge Peaks: 666m |

1. **ಮೆ:: ಗೈಲ್ (ಇಂಡಿಯಾ) ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ:: ಗೈಲ್ (ಇಂಡಿಯಾ) ಲಿಮಿಟೆಡ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ: **31–3–2012ರೊಳಗಾಗಿ** ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಅಭಿವೃದ್ಧಿದಾರರಿಂದ ಕ್ರೆಡಲ್ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter).
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 761

## ಕಂದಾಯ ಸಚಿವಾಲಯ

## ಸುತ್ತೋಲೆ

**ಸಂ: ಕಂಇ:91:ಟಿಎನ್‌ಆರ್: 2012, ಬೆಂಗಳೂರು. ದಿನಾಂಕ: 03-03-2012**

ರಾಜ್ಯದಲ್ಲಿ 2011-12ನೇ ಸಾಲಿನಲ್ಲಿ ಮುಂಗಾರು ಮತ್ತು ಹಿಂಗಾರು ಮಳೆಯು ವಿಫಲವಾಗಿರುವುದರಿಂದ ಹೆಚ್ಚಿನ ಜಿಲ್ಲೆಗಳಲ್ಲಿ ಉದ್ಭವವಾಗಿರುವ ಬರಪರಿಸ್ಥಿತಿಯ ಹಿನ್ನೆಲೆಯಲ್ಲಿ ಈಗಾಗಲೇ 24 ಜಿಲ್ಲೆಗಳ 123 ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿದೆ.

ಈ ಬಗ್ಗೆ ದಿನಾಂಕ: 22-02-2012 ರಂದು ನಡೆದ ಜಿಲ್ಲಾಧಿಕಾರಿಗಳು/ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯಲ್ಲಿ ಕೆಲವು ಜಿಲ್ಲಾಧಿಕಾರಿಗಳು ಮಳೆಯ ಕೊರತೆಯಿಂದಾಗಿ ಈಗಾಗಲೇ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಮೇವು ಅಭಾವ ಎದುರಿಸುತ್ತಿದ್ದು, ಈ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ಅಂತರ್ ಜಿಲ್ಲಾ ಸಾಗಾಣಿಕೆಯಲ್ಲಿ ಕೆಲವು ತೊಡಕುಗಳು ಬರುತ್ತಿರುವುದರಿಂದ, ಅಂತರ್ ಜಿಲ್ಲಾ ಮೇವು ಸಾಗಾಣಿಕೆ ನಿರ್ಬಂಧವಿದ್ದಲ್ಲಿ ಈ ಕೂಡಲೇ ಅದನ್ನು ತೆರವುಗೊಳಿಸಲು ಕೋರಿರುತ್ತಾರೆ. ಅಂತರ್ ಜಿಲ್ಲಾ ಮೇವು ಸಾಗಾಣಿಕೆ ನಿರ್ಬಂಧ ಹೇರಿದ್ದಲ್ಲಿ, ತಕ್ಷಣ ಜಾರಿಗೆ ಬರುವಂತೆ ಅಂತರ್ ಜಿಲ್ಲಾ ಮೇವು ಸಾಗಾಣಿಕೆ ನಿರ್ಬಂಧ ಈ ಮೂಲಕ ತೆರವುಗೊಳಿಸಲಾಗಿದೆ.

ಈ ಮೂಲಕ ಒಂದು ಜಿಲ್ಲೆಯಲ್ಲಿ ಮೇವು ಅಭಾವವಿದ್ದಲ್ಲಿ, ಈ ಅಭಾವವನ್ನು ನೀಗಿಸುವ ಸಲುವಾಗಿ ಮತ್ತೊಂದು ಜಿಲ್ಲೆಯಿಂದ ಮೇವನ್ನು ಸಾಗಾಣಿಕೆ ಮೂಲಕ ಖರೀದಿಸಿ ಅಭಾವವನ್ನು ಬಗೆಹರಿಸಿಕೊಳ್ಳಲು ಕ್ರಮವಹಿಸುವಂತೆ ಅಕ್ಕಪಕ್ಕದ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. ಯಾವುದೇ ರೀತಿಯ ಗೊಂದಲಗಳಿಗೆ ಅವಕಾಶವೀಯದೆ, ಪರಸ್ಪರ ಹೊಂದಾಣಿಕೆ ಮತ್ತು ಸಹಕಾರ ಮನೋಭಾವದಿಂದ ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಸೂಚಿಸಿದೆ.

**ಕೆ. ಅಮರನಾರಾಯಣ**
ಸರ್ಕಾರದ ಕಾರ್ಯದರ್ಶಿ
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

ಪಿ.ಆರ್: 762

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಸ್ಫೂರ್ತಿ ಸ್ವಸಹಾಯ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಜಿಲ್ಲಾ ಸಲಹಾ ಸಮಿತಿಯನ್ನು ರಚಿಸುವುದು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011, ದಿನಾಂಕ: 22-10-2011.
2. ತಿದ್ದುಪಡಿ ಆದೇಶ ಸಂಖ್ಯೆ: ಮಮಇ 295 ಪಿಎಚ್‌ಪಿ 2011, ದಿನಾಂಕ: 14-12-2011.
3. ತಿದ್ದುಪಡಿ-2 ಆದೇಶ ಸಂಖ್ಯೆ: ಮಮಇ 50 ಪಿಎಚ್‌ಪಿ 2012, ದಿನಾಂಕ: 08-02-2012.
4. ತಿದ್ದುಪಡಿ-3 ಆದೇಶ ಸಂಖ್ಯೆ: ಮಮಇ 50 ಪಿಎಚ್‌ಪಿ 2012, ದಿನಾಂಕ: 18-02-2012.
5. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ವಿಹಿನಾಸಇ/ಯೋ.ಶಾ/ಸಿ-9/ಸ್ಫೂ.ಸ್ವಸ.ಯೋ/03/2011-12/4966, ದಿನಾಂಕ: 31-01-2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದ 30 ಜಿಲ್ಲೆಗಳ 176 ತಾಲ್ಲೂಕುಗಳ ಪೈಕಿ ಈಗಾಗಲೇ ಸ್ಫೂರ್ತಿ ಸ್ವಸಹಾಯ ಯೋಜನೆಯನ್ನು ಅನುಷ್ಠಾನಗೊಳಿಸಿರುವ 29 ತಾಲ್ಲೂಕುಗಳನ್ನು ಹೊರತುಪಡಿಸಿ 147 ತಾಲ್ಲೂಕುಗಳಲ್ಲಿ ಸ್ಫೂರ್ತಿ ಸ್ವಸಹಾಯ ಯೋಜನೆಯನ್ನು ಸದರಿ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ತಗಲುವ ಅಂದಾಜು ವೆಚ್ಚದಂತೆ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (2)ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011, ದಿನಾಂಕ: 22-10-2011ರ ಆದೇಶ ಭಾಗದಲ್ಲಿ **"**ನಿಗದಿಪಡಿಸಿರುವ ಅನುದಾನವನ್ನು ಮೀರದಂತೆ ಜಿಲ್ಲಾವಾರು ತಾಲ್ಲೂಕುಗಳ ಸಂಖ್ಯೆಯನ್ನು ಪರಿಶೀಲಿಸಿ ಹಂಚಿಕೆ ಮಾಡಿಕೊಳ್ಳಲು ಹಾಗೂ ಈ ಯೋಜನೆಯ ಅನುಷ್ಠಾನದಲ್ಲಿ ಅಲ್ಪಸ್ವಲ್ಪ ಮಾರ್ಪಾಡುಗಳಿದ್ದಲ್ಲಿ, ಆಯವ್ಯಯವನ್ನು ಮೀರದಂತೆ ಮತ್ತು ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸೂಕ್ತ ಮಾರ್ಪಾಡು ಮಾಡಿಕೊಳ್ಳಲು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರಿಗೆ ಅಧಿಕಾರ ನೀಡಲಾಗಿದೆ**"** ಎಂದು ತಿದ್ದಿ ಓದಿಕೊಳ್ಳುವಂತೆ ಆದೇಶಿಸಲಾಗಿದೆ.

ಮೇಲೆ (3)ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011, ದಿನಾಂಕ: 22-10-2011ಕ್ಕೆ ಹೊರಡಿಸಲಾಗಿರುವ ತಿದ್ದುಪಡಿ ಸಂಖ್ಯೆ: ಮಮಇ 295 ಪಿಎಚ್‌ಪಿ 2011, ದಿನಾಂಕ: 14-12-2011ರ ಅನುಬಂಧದ ಬದಲಿಗೆ ತಿದ್ದುಪಡಿ-2ಕ್ಕೆ ಲಗತ್ತಿಸಿರುವ ಅನುಬಂಧವನ್ನು ಕೂಡಿಸಿ ತಿದ್ದಿ ಓದಿಕೊಳ್ಳುವಂತೆ ಆದೇಶಿಸಲಾಗಿದೆ.

ಮೇಲೆ (4)ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 143 ಪಿಎಚ್‌ಪಿ 2011, ದಿನಾಂಕ: 22-10-2011ಕ್ಕೆ ಹೊರಡಿಸಲಾಗಿರುವ ತಿದ್ದುಪಡಿ-2 ಸಂಖ್ಯೆ: ಮಮಇ 50 ಪಿಎಚ್‌ಪಿ 2012, ದಿನಾಂಕ: 08-02-2012ಕ್ಕೆ 2ನೇ ಕಂಡಿಕೆಯನ್ನು ಸೇರಿಸಿ ತಿದ್ದಿ ಓದಿಕೊಳ್ಳುವಂತೆ ಆದೇಶಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರು ಸ್ಫೂರ್ತಿ ಸ್ವಸಹಾಯ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಆಡಳಿತದ ಸಹಕಾರ ಅತ್ಯಗತ್ಯವಾಗಿದ್ದು, ಇದರೊಂದಿಗೆ ತಾಲ್ಲೂಕು ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುವ ವಿದ್ಯಾಸಂಸ್ಥೆಗಳು, ತರಬೇತಿ ಕೇಂದ್ರಗಳು, ಸ್ವಯಂ ಸೇವಾ ಸಂಸ್ಥೆಗಳು, ಆರ್ಥಿಕ ಸಂಸ್ಥೆಗಳ ಸೇವೆಗಳನ್ನು ಸಮನ್ವಯಗೊಳಿಸಿ ಯೋಜನೆಯನ್ನು ಯಶಸ್ವಿಗೊಳಿಸಬೇಕಾಗಿದೆ. ಆದ್ದರಿಂದ ಈ ಯೋಜನೆಯಡಿ ಕೈಗೊಳ್ಳಬೇಕಾದ ಎಲ್ಲಾ

ಕಾರ್ಯಕ್ರಮಗಳನ್ನು ಚರ್ಚಿಸಿ ಯೋಜನೆಯ ಅನುಷ್ಠಾನದ ಬಗ್ಗೆ ಸೂಕ್ತ ಸಲಹೆ ಮಾರ್ಗದರ್ಶನ ನೀಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಇತರೆ ಜಿಲ್ಲಾ ಮಟ್ಟದ ಅಧಿಕಾರಿಗಳ ಹಾಗೂ ಇತರೆ ಅವಶ್ಯಕ ಅಧಿಕಾರೇತರರ ಸದಸ್ಯತ್ವದೊಂದಿಗೆ ಸಲಹಾ ಸಮಿತಿ ರಚಿಸಿ ತನ್ಮೂಲಕ ಸೂಕ್ತ ಹಾಗೂ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆಂದು ತಿಳಿಸುತ್ತಾ, ಈ ಕೆಳಕಂಡಂತೆ ಜಿಲ್ಲಾ ಸಲಹಾ ಸಮಿತಿಯನ್ನು ರಚಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| | | | |
|---|---|---|---|
| 1. | ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | – | ಸದಸ್ಯರು |
| 3. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | – | ಸದಸ್ಯರು |
| 4. | ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯರು |
| 5. | ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಅಧಿಕಾರಿ | – | ಸದಸ್ಯರು |
| 6. | ಜಿಲ್ಲಾ ವಾರ್ತಾಧಿಕಾರಿಗಳು | – | ಸದಸ್ಯರು |
| 7. | ಸಿ.ಬಿ.ಆರ್.ನೆಟ್‌ವರ್ಕ್ (ಸೌತ್ ಏಷಿಯಾ) ಬೆಂಗಳೂರು ಸ್ವಯಂಸೇವಾ ಸಂಸ್ಥೆಯ ಪ್ರತಿನಿಧಿ | – | ಸದಸ್ಯರು |
| 8. | ಜಿಲ್ಲಾ ಸಂಚಾಲಕರು | – | ಸದಸ್ಯರು |
| 9. | ಸ್ವಯಂಸೇವಾ ಸಂಸ್ಥೆ ಪ್ರತಿನಿಧಿ | – | ಸದಸ್ಯರು |
| 10. | ಎಂ.ಆರ್.ಡಬ್ಲ್ಯೂ/ವಿ.ಆರ್.ಡಬ್ಲ್ಯೂ. | – | ಸದಸ್ಯರು |
| 11. | 2007–08ನೇ ಸಾಲಿನಲ್ಲಿ ಅನುಷ್ಠಾನಗೊಂಡ ಸ್ಫೂರ್ತಿ ಸ್ವಸಹಾಯ ಯೋಜನೆಯಲ್ಲಿನ ಆಯಾಯ ಜಿಲ್ಲೆಯ ಸಂಬಂಧಪಟ್ಟ ತಾಲ್ಲೂಕಿನ ಕಾರ್ಯನಿರ್ವಹಣಾ ಅಧಿಕಾರಿಗಳು | – | ಸದಸ್ಯರು |
| 12. | ಜಿಲ್ಲಾ ಅಂಗವಿಕಲರ ಕಲ್ಯಾಣಧಿಕಾರಿಗಳು | – | ಸದಸ್ಯ–ಕಾರ್ಯದರ್ಶಿ |

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 50 ಪಿಎಚ್‌ಪಿ 2012, ಬೆಂಗಳೂರು, ದಿನಾಂಕ: 22–02–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಸ್ಫೂರ್ತಿ ಸ್ವಸಹಾಯ ಯೋಜನೆಯಡಿ ಕೈಗೊಳ್ಳಬೇಕಾದ ಎಲ್ಲಾ ಕಾರ್ಯಕ್ರಮಗಳನ್ನು ಚರ್ಚಿಸಿ ಯೋಜನೆಯ ಅನುಷ್ಠಾನದ ಬಗ್ಗೆ ಸೂಕ್ತ ಸಲಹೆ ಮಾರ್ಗದರ್ಶನ ನೀಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಇತರೆ ಜಿಲ್ಲಾ ಮಟ್ಟದ ಅಧಿಕಾರಿಗಳ ಹಾಗೂ ಇತರೆ ಅವಶ್ಯಕ ಅಧಿಕಾರೇತರರ ಸದಸ್ಯತ್ವದೊಂದಿಗೆ ಸಲಹಾ ಸಮಿತಿ ರಚಿಸಿ ತನ್ಮೂಲಕ ಸೂಕ್ತ ಹಾಗೂ ಅವಶ್ಯಕ ಕ್ರಮಗಳನ್ನು ಕೈಗೊಳ್ಳುವ ಸಲುವಾಗಿ ಈ ಕೆಳಕಂಡಂತೆ ಜಿಲ್ಲಾ ಸಲಹಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಿದೆ.

| | | | |
|---|---|---|---|
| 1. | ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | – | ಸದಸ್ಯರು |
| 3. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | – | ಸದಸ್ಯರು |
| 4. | ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯರು |
| 5. | ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಅಧಿಕಾರಿ | – | ಸದಸ್ಯರು |
| 6. | ಜಿಲ್ಲಾ ವಾರ್ತಾಧಿಕಾರಿಗಳು | – | ಸದಸ್ಯರು |
| 7. | ಸಿ.ಬಿ.ಆರ್.ನೆಟ್‌ವರ್ಕ್ (ಸೌತ್ ಏಷಿಯಾ) ಬೆಂಗಳೂರು ಸ್ವಯಂಸೇವಾ ಸಂಸ್ಥೆಯ ಪ್ರತಿನಿಧಿ | – | ಸದಸ್ಯರು |
| 8. | ಜಿಲ್ಲಾ ಸಂಚಾಲಕರು | – | ಸದಸ್ಯರು |
| 9. | ಸ್ವಯಂಸೇವಾ ಸಂಸ್ಥೆ ಪ್ರತಿನಿಧಿ | – | ಸದಸ್ಯರು |
| 10. | ಎಂ.ಆರ್.ಡಬ್ಲ್ಯೂ/ವಿ.ಆರ್.ಡಬ್ಲ್ಯೂ. | – | ಸದಸ್ಯರು |
| 11. | 2007–08ನೇ ಸಾಲಿನಲ್ಲಿ ಅನುಷ್ಠಾನಗೊಂಡ ಸ್ಫೂರ್ತಿ ಸ್ವಸಹಾಯ ಯೋಜನೆಯಲ್ಲಿನ ಆಯಾಯ ಜಿಲ್ಲೆಯ ಸಂಬಂಧಪಟ್ಟ ತಾಲ್ಲೂಕಿನ ಕಾರ್ಯನಿರ್ವಹಣಾ ಅಧಿಕಾರಿಗಳು | – | ಸದಸ್ಯರು |
| 12. | ಜಿಲ್ಲಾ ಅಂಗವಿಕಲರ ಕಲ್ಯಾಣಧಿಕಾರಿಗಳು | – | ಸದಸ್ಯ–ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್: 763

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಿಂದ ಅರಣ್ಯ ಇಲಾಖೆಗೆ ನೆಡುತೋಪುಗಳನ್ನು ಹಿಂತಿರುಗಿಸುವ ಬಗ್ಗೆ.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಅಅನಿನಿ/ಎ5/ಅಪ್ರಹಿ/ಸಿಆರ್–226/2011–12, ದಿನಾಂಕ: 08/05–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 05–12–2011ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರು ದಿನಾಂಕ: 19–07–2011ರಂದು ನಡೆದ ನಿಗಮದ 232ನೇ ನಿರ್ದೇಶಕ ಮಂಡಳಿಯ ಸಭೆಯಲ್ಲಿ ಸರ್ಕಾರವು ನಿಗಮದ ವತಿಯಿಂದ ನೀಲಗಿರಿ ಹಾಗೂ ಅಕೇಶಿಯಾ ನೆಡುತೋಪುಗಳನ್ನು ಅರಣ್ಯ ಜಮೀನುಗಳ ಮೇಲೆ ಬೆಳೆಸುವುದನ್ನು ನಿಷೇಧಿಸಿರುವ ಹಾಗೂ ಅದರ ಪರಿಣಾಮ ಸ್ವರೂಪವಾಗಿ 35000 ಹೆಕ್ಟೇರ್ ಅರಣ್ಯ ಜಮೀನನ್ನು ಅರಣ್ಯ ಇಲಾಖೆಗೆ ಹಿಂತಿರುಗಿಸುವ ಕುರಿತು ಈಗಾಗಲೇ ಕಟಾವಿಗೆ ಸಿದ್ಧವಾಗಿರುವ ನೆಡುತೋಪುಗಳಿಂದ ಮೆದುಮರ ತೆಗೆದುಕೊಂಡು ಖಾಲಿ ಜಾಗವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದಲ್ಲದೆ ಮೆದುಮರ ಇರುವಂತಹ ನೆಡುತೋಪುಗಳನ್ನು ಕೂಡ ಮೌಲ್ಯಮಾಪನ ಮಾಡಲು ನಿಗಮದಿಂದ ಇಲಾಖೆಗೆ ಪಾವತಿ ಮಾಡಬೇಕಾದ ಗೇಣಿ ಬಾಡಿಗೆಗೆ ಬದಲಾಗಿ ಹಿಂತಿರುಗಿಸಲಾಗುವುದೆಂದು ತಿಳಿಸಿ, ನಿಗಮದ ಅಧಿಕಾರಿಗಳು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಯೋಗ್ಯವಿರುವ ನೆಡುತೋಪಗಳ ಪಟ್ಟಿಯನ್ನು ಈಗಾಗಲೇ ತಯಾರಿಸಿದ್ದು, ಈ ನೆಡುತೋಪುಗಳ ಮೌಲ್ಯಮಾಪನ ಆಗಬೇಕಾಗಿರುತ್ತದೆಯೆಂದು ಹಾಗೂ ಇದಕ್ಕಾಗಿ ನಿಗಮದ ವತಿಯಿಂದ ಸಂಬಂಧಪಟ್ಟ ಅಧಿಕಾರಿಗಳು ಹಾಗೂ ಇಲಾಖಾ ವತಿಯಿಂದ ಇಬ್ಬರು ಹಿರಿಯ ಅಧಿಕಾರಿಗಳನ್ನು ನೇಮಕ ಮಾಡುವುದರ ಮೂಲಕ ಜಂಟಿಯಾಗಿ ಮೌಲ್ಯಮಾಪನ ಕಾರ್ಯಕ್ರಮವನ್ನು ಮಾಡಲು ಕ್ರಮ ಕೈಗೊಳ್ಳತಕ್ಕದೆಂದು ನಿಗಮದ ನಿರ್ದೇಶಕ ಮಂಡಳಿಯು ತೀರ್ಮಾನ ಮಾಡಿರುತ್ತದೆಯೆಂದು ತಿಳಿಸಿ, ಇದರ ಸಲುವಾಗಿ ಸರ್ಕಾರವು ಸೂಕ್ತ ಅಧಿಕಾರಿಗಳನ್ನೊಳಗೊಂಡಂತಹ ಒಂದು ಸಮಿತಿಯನ್ನು ರಚಿಸಲು ಆದೇಶ ಹೊರಡಿಸಲು ಕೋರಿ ಸಮಿತಿಯು (team) ರಚನೆಯನ್ನು ಈ ಕೆಳಗಿನಂತೆ ಮಾಡಬಹುದಾಗಿದೆಯೆಂದು ಸರ್ಕಾರಕ್ಕ ಪ್ರಸ್ತಾವನೆ ಸಲ್ಲಿಸಿರುತ್ತಾರೆ:–

**ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ವತಿಯಿಂದ**

1. ಶ್ರೀ ವೀರೇಂದ್ರ ಸಿಂಗ್, ಭಾ.ಸ.ಸೇ., ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ. – ಅಧ್ಯಕ್ಷರು
2. ವಿಭಾಗೀಯ ವ್ಯವಸ್ಥಾಪಕರುಗಳು ಧಾರವಾಡ/ಶಿವಮೊಗ್ಗ/ಚಿಕ್ಕಮಗಳೂರು, ಕೋಲಾರ. – ಸದಸ್ಯರು

**ಅರಣ್ಯ ಇಲಾಖೆಯ ವತಿಯಿಂದ**

1. ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., – ಸದಸ್ಯರು
2. ಶ್ರೀ ಪುನೀತ್ ಪಾಠಕ್, ಭಾ.ಅ.ಸೇ., – ಸದಸ್ಯರು

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 116 ಎಫ್‌ಪಿಸಿ 2011, ಬೆಂಗಳೂರು, ದಿನಾಂಕ: 17–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ನೀಲಗಿರಿ ಹಾಗೂ ಅಕೇಶಿಯಾ ನೆಡುತೋಪುಗಳನ್ನು ಅರಣ್ಯ ಜಮೀನುಗಳ ಮೇಲೆ ಬೆಳೆಸುವುದನ್ನು ನಿಷೇಧಿಸಿರುವ ಹಾಗೂ ಅದರ ಪರಿಣಾಮ ಸ್ವರೂಪವಾಗಿ 35000 ಹೆಕ್ಟೇರ್ ಅರಣ್ಯ ಜಮೀನನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಅರಣ್ಯ ಇಲಾಖೆಗೆ ಹಿಂತಿರುಗಿಸುವ ಕಾರಣದಿಂದ ಈಗಾಗಲೇ ಕಟಾವಿಗೆ ಸಿದ್ಧವಾಗಿರುವ ನೆಡುತೋಪುಗಳಿಮದ ಮೆದುಮರ ತೆಗೆದುಕೊಂಡು ಖಾಲಿ ಜಾಗವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸುವುದಲ್ಲದೆ ಮೆದುಮರ ಇರುವಂತಹ ನೆಡುತೋಪುಗಳನ್ನು ಕೂಡ ಮೌಲ್ಯಮಾಪನ ಮಾಡಲು ಅಧಿಕಾರಿಗಳು ಹಾಗೂ ಇಲಾಖಾ ವತಿಯಿಂದ ಇಬ್ಬರು ಹಿರಿಯ ಅಧಿಕಾರಿಗಳನ್ನು ನೇಮಕ ಮಾಡುವುದರ ಮೂಲಕ ಜಂಟಿಯಾಗಿ ಮೌಲ್ಯಮಾಪನ ಕಾರ್ಯಕ್ರಮವನ್ನು ಮಾಡಲು ಈ ಕೆಳಗಿನಂತೆ ಒಂದು ಸಮಿತಿಯನ್ನು ರಚಿಸಿ ಆದೇಶಿಸಿದೆ.

**ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ವತಿಯಿಂದ**

1. ಶ್ರೀ ವೀರೇಂದ್ರ ಸಿಂಗ್, ಭಾ.ಸ.ಸೇ., ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ. – ಅಧ್ಯಕ್ಷರು
2. ವಿಭಾಗೀಯ ವ್ಯವಸ್ಥಾಪಕರುಗಳು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ ಧಾರವಾಡ/ಶಿವಮೊಗ್ಗ/ಚಿಕ್ಕಮಗಳೂರು, ಕೋಲಾರ. – ಸದಸ್ಯರು

**ಅರಣ್ಯ ಇಲಾಖೆಯ ವತಿಯಿಂದ**

1. ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., – ಸದಸ್ಯರು
2. ಶ್ರೀ ಪುನೀತ್ ಪಾಠಕ್, ಭಾ.ಅ.ಸೇ., – ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 764

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇವರ ಅಮಾನತ್ತನ್ನು ಮುಂದುವರೆಸುವ ಕುರಿತು.

**ಓದಲಾಗಿದೆ :**
1. ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಎಸಿಜಡ್, ಹೈದರಾಬಾದ್ ಇವರ ಪತ್ರ ಸಂಖ್ಯೆ: DPDHY/2010/RC-09/2009BLR/716, ದಿನಾಂಕ: 24–06–2010.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 170 ಎಂಎಸ್ಎ 2010, ದಿನಾಂಕ: 28–07–2010.
3. ಪೊಲೀಸ್ ಅಧೀಕ್ಷಕರು, ಸಿಬಿಐ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ–5/3/09/09/ಸಿಬಿಐ/ಬಿಎಲ್‌ಆರ್/2010–7741, ದಿನಾಂಕ: 02–12–2010.
4. ಸರ್ಕಾರದ ಆದೇಶ ಸಂಖ್ಯೆ: ಆಕುಕ 170 ಎಂಎಸ್ಎ 2010 ದಿನಾಂಕ: 28–01–2011.
5. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 1051/2011ರ ತೀರ್ಪು ದಿನಾಂಕ: 04–08–2011.
6. ಡಾ: ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಇವರ ದಿನಾಂಕ: 17–08–2011 ಹಾಗೂ 13–10–2010ರ ಮನವಿ ಪತ್ರ.
7. ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ–5/3/09/09/ಸಿಬಿಐ/ಬಿಎಲ್‌ಆರ್/2011–6584 ದಿನಾಂಕ: 19–10–2011.
8. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 59 ಎಸ್‌ಡಿಇ 81 ದಿನಾಂಕ: 17–12–1981

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಎಸಿಜಡ್, ಹೈದರಾಬಾದ್ ಇವರು ತಮ್ಮ ಪತ್ರದಲ್ಲಿ ಡಾ: ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಮೋಟಾರು ವಾಹನ ಅಪಘಾತ ಕ್ಲೇಮಿನ ಪ್ರಕರಣದಲ್ಲಿ ವಿಮಾ ಸಂಸ್ಥೆಯೊಂದಿಗೆ ಶಾಮೀಲಾದ 5 ಜನರಿಗೆ ಸುಳ್ಳು ಗಾಯದ ಪ್ರಮಾಣ ಪತ್ರ ನೀಡಿದ್ದರ ಮೇರೆಗೆ ರೂ.20,33,601–00 (ರೂಪಾಯಿ ಇಪ್ಪತ್ತು ಲಕ್ಷದ ಮೂವತ್ಮೂರು ಸಾವಿರದ ಆರುನೂರ ಒಂದು ಮಾತ್ರ) ಹಣವನ್ನು ಕ್ಲೇಮುದಾರರಿಗೆ ಪಾವತಿಸಲು ಕಾರಣರಾದ ಪ್ರಯುಕ್ತ ಸದರಿ ವೈದ್ಯರ ವಿರುದ್ಧ ವಿವರವಾದ ವರದಿಯನ್ನು ಸಲ್ಲಿಸಿ, ಸದರಿ ವೈದ್ಯರಿಗೆ ಸರ್ಕಾರದ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಚಾರ್ಜ್‌ಶೀಟ್‌ನ್ನು ಹಾಕುವ ಸಲುವಾಗಿ ಇವರನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ಕೋರಿದ್ದರ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 28–07–2010ರ ಸರ್ಕಾರದ ಆದೇಶದ ರೀತ್ಯಾ ಸದರಿ ವೈದ್ಯಾಧಿಕಾರಿಯವರನ್ನು ಲಂಚ ನಿರೋಧ ಕಾಯ್ದೆ 1898ರ 19(1)(ಸಿ) ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿಭಾಗದ ಮುಖ್ಯಸ್ಥರು, ಸಿಬಿಐ, ಎಸಿಬಿ, ಬೆಂಗಳೂರು ಇವರು ಭಾರತ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: 142/5/84–ಎವಿಡಿ 1 ದಿನಾಂಕ: 20–06–1986ರ ಪತ್ರದ ಪ್ರತಿಯನ್ನು ಲಗತ್ತಿಸುತ್ತಾ, ಡಾ: ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲು ಕ್ರಮ ಕೈಗೊಳ್ಳುವಂತೆ ಕೋರಿದ ಪ್ರಯುಕ್ತ ಈ ಬಗ್ಗೆ ಪರಿಶೀಲಿಸಿ ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದ ರೀತ್ಯಾ ಡಾ: ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇವರ ವಿರುದ್ಧ ದಾಖಲಾದ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಮತ್ತು ಇವರ ವಿರುದ್ಧ ನ್ಯಾಯಾಲಯದಲ್ಲಿ ಚಾರ್ಜ್‌ಶೀಟ್‌ನ್ನು ಹಾಕಿರುವ ಪ್ರಯುಕ್ತ ಇವರ ವಿರುದ್ಧ ಶಿಸ್ತು ಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತು ಗೊಳಿಸಲಾಗಿತ್ತು. ತಮ್ಮ ಅಮಾನತ್ತಿನ ಆದೇಶವನ್ನು ಪ್ರಶ್ನಿಸಿ ಮೇಲೆ ಕ್ರಮ ಸಂಖ್ಯೆ:(5)ರಲ್ಲಿ ಓದಲಾದಂತೆ ಡಾ: ಮೋಹನ್ ಪಿ. ಕಾಲೇಕರ್, ಇವರು ತಮ್ಮ ಅಮಾನತ್ತನ್ನು ವಿಖಂಡನಗೊಳಿಸುವ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 1051/2011ರಲ್ಲಿ ಪ್ರಕರಣವನ್ನು ದಾಖಲಿಸಿರುತ್ತಾರೆ. ಸದರಿ ಪ್ರಕರಣವನ್ನು ಗೌ:ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 04–08–2011ರಂದು ವಿಚಾರಣೆಗೆ ಒಳಪಡಿಸಿ, ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.

The Applicant in the present application who is a Senior Specialist and Deputy Chief Medical Officer of MGM Hopital, Nippani in Belgaum District is seeking quashing of the suspension order bearing No. Aakuka 170 MSA 2010 dated: 28-01-2011 (Annexure-A2) The suspension is on the charge that the Applicant had committed offence under Section 13(2) read with Section 13(1) of the Prevention of Corruption Act and Section 120B, 409, 420, 468 and 471 of IPC. It is also stated that charge sheet has already been placed by the CBI. Bangalore, against the Applicant in the Court.

The learned Counsel for the Applicant submits that already six months have elapsed from the date of suspension and as per rules, this requires review of suspension.

In view of this submission, after hearing Sri N.B. Patil, Learned Government Pleader, the application is disposed of without expressing any opinion on merits of the case, but directing the Respondent to consider the plea of the Applicant to review the order of suspension. Decision in that regard shall be taken within two months from today and communicated to the Applicant.

ಮೇಲೆ (6)ರಲ್ಲಿ ಓದಲಾದ ಮನವಿ ಪತ್ರದಲ್ಲಿ ಡಾ: ಮೋಹನ್ ಪಿ. ಕಾಲೇಕರ ಅವರು ಸರ್ಕಾರ ತಮ್ಮನ್ನು ಅಮಾನತ್ತುಗೊಳಿಸಿರುವ ಮೇಲೆ (1)ರಲ್ಲಿ ಓದಲಾದ ದಿನಾಂಕ: 28-01-2011ರ ಸರ್ಕಾರದ ಆದೇಶವನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂಖ್ಯೆ:1051/2011ರ ಮೇಲೆ ದಿನಾಂಕ: 04-08-2011ರಂದು ತೀರ್ಪು ನೀಡಿ ರದ್ದುಗೊಳಿಸಿರುವುದರಿಂದ ತಮ್ಮ ಅಮಾನತ್ತನ್ನು ವಿಖಂಡನಗೊಳಿಸಿ ಸರ್ಕಾರಿ ಸೇವೆಯಲ್ಲಿ ಪುನರ್ ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಡಾ:ಮೋಹನ್ ಪಿ.ಕಾಲೇಕರ್ ಅವರ ಅಮಾನತ್ತಿನ ಆದೇಶವನ್ನು ವಿಖಂಡನಗೊಳಿಸಿ ಸರ್ಕಾರಿ ಸೇವೆಗೆ ಮರು ನೇಮಿಸುವ ಬಗ್ಗೆ ಅಭಿಪ್ರಾಯ ನೀಡುವಂತೆ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಬೆಂಗಳೂರು ಅವರನ್ನು ಕೋರಲಾಗಿತ್ತು. ಡಾ:ಮೋಹನ್ ಪಿ.ಕಾಲೇಕರ್ ಅವರು ವಿಶೇಷ ನ್ಯಾಯಾಲಯ, ಧಾರವಾಡ ಇಲ್ಲಿ ಅಧಿವಿಚಾರಣೆ ಎದುರಿಸುತ್ತಿರುವುದರಿಂದ ಹಾಗೂ ದೋಷಾರೋಪಣಾ ಪಟ್ಟಿಯಲ್ಲಿ ತಿಳಿಸಿರುವ ಪ್ರಾಸಿಕ್ಯೂಷನ್ ಸಾಕ್ಷಿಗಳು ಅವರ ಸ್ವಂತ ಸಿಬ್ಬಂದಿಯಾಗಿರುವುದರಿಂದ ಇವರ ಅಮಾನತ್ತನ್ನು ರದ್ದುಗೊಳಿಸಿದರೆ ಅವರೂ ಸಹ ಅಪರಾಧಿ ವ್ಯಕ್ತಿಗಳೊಂದಿಗೆ ಜೊತೆಗೂಡಿ ಸಾಕ್ಷಿಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆ ಇರುವುದರಿಂದ ಇವರ ಅಮಾನತ್ತನ್ನು ಮುಂದುವರೆಸಬೇಕೆಂದು ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಡೆಪ್ಯುಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಎಸಿಬಿ, ಬೆಂಗಳೂರು ಅವರು ಸರ್ಕಾರಕ್ಕೆ ವರದಿ ಮಾಡಿದ್ದಾರೆ.

ಮೇಲೆ (8)ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ದೀರ್ಘಕಾಲದಿಂದ ಅಮಾನತ್ತಿನಲ್ಲಿ ಮುಂದುವರೆದ ಸರ್ಕಾರಿ ನೌಕರರ ಪ್ರಕರಣಗಳನ್ನು ಪರಿಶೀಲಿಸುವ ಬಗ್ಗೆ ನಿರ್ದೇಶನ ನೀಡಿದೆ. ಅದರಲ್ಲಿ ಅಮಾನತ್ತನ್ನು ಪರಿಶೀಲಿಸುವ ಸಮಯದಲ್ಲಿ ಅಧಿಕೃತ ಜ್ಞಾಪನದ ಉಧೃತ ಭಾಗದಲ್ಲಿ ಈ ಕೆಳಕಂಡಂತೆ ನಿರ್ದೇಶಿಸಿದೆ.

> While taking a decision on this issue, the concerned authorities were also required to examine whether there was any likelihood of the Government servants tampering with any evidence or influencing any witness if he was so reinstated. The seriousness of the charge against the Government Servant in the criminal or disciplinary case was also required to be taken into account.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 1051/2011ರಲ್ಲಿ ದಿನಾಂಕ: 04-08-2011ರಂದು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಬೆಂಗಳೂರು ಇವರ ಅಭಿಪ್ರಾಯ ಹಾಗೂ ಮೇಲೆ (7)ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನ ದಿನಾಂಕ: 17-12-1981ರಲ್ಲಿ ನೀಡಿರುವ ನಿರ್ದೇಶನದ ಹಿನ್ನೆಲೆಯಲ್ಲಿ ಡಾ:ಮೋಹನ್ ಪಿ. ಕಾಲೇಕರ್, ಹಿರಿಯ ತಜ್ಞರು ಮತ್ತು ಉಪಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇವರ ಅಮಾನತ್ತನ್ನು ವಿಖಂಡನಗೊಳಿಸುವ ಬಗ್ಗೆ ಪರಿಶೀಲಿಸಿದೆ. ಡಾ:ಮೊಹನ್ ಪಿ. ಕಾಲೇಕರ್ ಇವರು ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿರುವುದರಿಂದ ಮತ್ತು ಇವರ ವಿರುದ್ಧದ ಆಪಾದನೆಗಳಿಗೆ ಸಂಬಂಧಿಸಿದಂತೆ ಈಗಾಗಲೇ ವಿಶೇಷ ನ್ಯಾಯಾಲಯ, ಧಾರವಾಡ ಇಲ್ಲಿ ವಿಚಾರಣೆ ಮುಂದುವರೆದಿರುವುದರಿಂದ ಸದರಿಯವರು ತಮ್ಮೊಂದಿಗೆ ಎಸಗಿರುವ ಆಪಾದಿತರುಗಳೊಂದಿಗೆ ಪ್ರಕರಣದ ಬಗ್ಗೆ ಚರ್ಚಿಸುವ ಸಾಧ್ಯತೆಗಳು ಮತ್ತು ಸಾಕ್ಷಿದಾರರುಗಳ ಮೇಲೆ ಪ್ರಭಾವವನ್ನು ಬೀರುವ ಸಾಧ್ಯತೆಗಳು ಇರುವುದಾಗಿ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಸಿಬಿಐ, ಬೆಂಗಳೂರು ಇವರು ಅಭಿಪ್ರಾಯ ಪಟ್ಟಿರುವ ಹಿನ್ನೆಲೆಯಲ್ಲಿ ಸದರಿ ವೈದ್ಯಾಧಿಕಾರಿಯವರ ಅಮಾನತ್ತನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 170 ಎಂಎಸ್ಎ 2010 ಬೆಂಗಳೂರು, ದಿನಾಂಕ: 11-01-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ:ಮೋಹನ್ ಪಿ.ಕಾಲೇಕರ್, ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ, ಎಂ.ಜಿ.ಎಂ. ಆಸ್ಪತ್ರೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ ಇವರ ಅಮಾನತ್ತು ವಿಖಂಡನಗೊಳಿಸುವ ಕುರಿತು ಸರ್ಕಾರವು ಪರಿಶೀಲಿಸಿದೆ ಹಾಗೂ ಇವರನ್ನು ಅಮಾನತ್ತಿನಲ್ಲಿ ಮುಂದುವರೆಸಲು ತೀರ್ಮಾನಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್: 765 ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಕಟ್ಟಡ ನಿರ್ಮಾಣದ ಕೊಡುಗೆದಾರರಾದ ಶ್ರೀ ದಲೈಲಾಮರವರ ಹೆಸರನ್ನು ಇಡಲು ಮಂಜೂರಾತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ: ಉತಇ/ತ/ಕಟ್ಟಡ/ವಿವ-13/2005-06, ದಿನಾಂಕ: 20/09/2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ತಮ್ಮ ಪತ್ರದಲ್ಲಿ 2006-07ನೇ ಸಾಲಿನಲ್ಲಿ ಪ್ರಾರಂಭಿಸಲಾದ ಮುಂಡಗೋಡ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣದ ಸಲುವಾಗಿ ಬೌದ್ಧ ಗುರುಗಳಾದ ಪೂಜ್ಯ ದಲೈಲಾಮ ರವರು ರೂ. 100.00 ಲಕ್ಷಗಳನ್ನು ಅವರ ಸಂತ್ರಸ್ತರ ನಿಧಿಯಿಂದ ದೇಣಿಗೆಯಾಗಿ ನೀಡಿದ್ದು, ಅದರಂತೆ ಕಟ್ಟಡ ನಿರ್ಮಾಣಗೊಂಡು ಸಂಸ್ಥೆಯು ಸದರಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ ಎಂದು ಆದ್ದರಿಂದ ನಾಗರೀಕರು ಹಾಗೂ ವಿದ್ಯಾರ್ಥಿಗಳ ಅಪೇಕ್ಷೆಯಂತೆ ಸದರಿ ಸಂಸ್ಥೆಗೆ ದಲೈಲಾಮರವರ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯೆಂದು ನಾಮಕರಣ ಮಾಡಲು ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 238 ಇಟಿಐ 2011 ಬೆಂಗಳೂರು, ದಿನಾಂಕ: 25–02–2011**

ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಮಾನ್ಯ ದಲೈಲಾಮ ರವರು ರೂ. 100.00 ಲಕ್ಷಗಳನ್ನು ದಾನವಾಗಿ ನೀಡಿರುವ ಕಾರಣ ಸದರಿ ಸಂಸ್ಥೆಗೆ **"ಶ್ರೀ ದಲೈಲಾಮ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ"** ಎಂಬುದಾಗಿ ಹೆಸರನ್ನು ಇಡಲು ಸರ್ಕಾರದ ಮಂಜೂರಾತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲಾಗಿದೆ.

" ಸದರಿ ಸಂಸ್ಥೆಗೆ ಇಡಲಾಗುವ ಹೆಸರು ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕೆ ಮಾತ್ರ ಅನ್ವಯವಾಗುವುದೇ ವಿನ: ಉಳಿದ ಎಲ್ಲಾ ಪೂರ್ಣ ಹಕ್ಕು ಸರ್ಕಾರಕ್ಕೆ ಸೇರಿದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜೆ.ಎಸ್. ವಿಶ್ವನಾಥಪ್ಪ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ,
(ಉದ್ಯೋಗ ಮತ್ತು ತರಬೇತಿ)

ಪಿ.ಆರ್: 766

## ಒಳಾಡಳಿತ ಸಚಿವಾಲಯ

**ವಿಷಯ :** ಹೂವಿನ ಹಡಗಲಿ/ಮೀನಹಳ್ಳಿಯಲ್ಲಿ ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಕೇಂದ್ರ ನಿರ್ಮಾಣಕ್ಕಾಗಿ ಅನುಮೋದಿಸಿದ ಅನುದಾನದಲ್ಲಿ ರೂ. 5.00 ಕೋಟಿ ಅನುದಾನವನ್ನು ಕೊಪ್ಪಳ ಜಿಲ್ಲೆ ಮುನಿರಾಬಾದ್ ಹೋಬಳಿ ಹೊಸಹಳ್ಳಿ ಗ್ರಾಮದಲ್ಲಿ ನಿರ್ಮಿಸಲಾಗುತ್ತಿರುವ ಕೆ.ಎಸ್.ಆರ್.ಪಿ. ತರಬೇತಿ ಶಾಲೆಗೆ ತಿರುವ (divert) ಮಾಡುವ ಕುರಿತು.–

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: 26/ಬಿ6ಸಿ/2011–12, ದಿನಾಂಕ 25–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 25–11–2011ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 88 ಪಿಬಿಎಲ್ 2007, ದಿನಾಂಕ 01–02–2008ರಲ್ಲಿ ಹೂವಿನ ಹಡಗಲಿಯಲ್ಲಿ ಸಶಸ್ತ್ರ ಮೀಸಲು ಪಡೆ ತರಬೇತಿ ಕೇಂದ್ರವನ್ನು ರೂ. 16.4 ಕೋಟಿಗಳ ಅಂದಾಜು ವೆಚ್ಚದಲ್ಲಿ ನಿರ್ಮಣ ಮಾಡಲು ತಯಾರಿಸಿದ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. 2007–08 ಮತ್ತು 2008–09ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಒದಗಿಸಿ ಬಿಡುಗಡೆ ಮಾಡಿದ ಒಟ್ಟು ರೂ. 6.00 ಕೋಟಿಗಳ ಅನುದಾನವನ್ನು ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಸಂಸ್ಥೆಯಲ್ಲಿ ಠೇವಣಿ ಇಡಲಾಗಿರುತ್ತದೆ.

ನಂತರ ಸರ್ಕಾರಿ ಆದೇಶ ಸಂಖ್ಯೆಯ: ಹೆಚ್‌ಡಿ 86 ಪಿಬಿಎಲ್ 2008 ದಿನಾಂಕ 20–06–2009ರಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದ್ದ ಸಶಸ್ತ್ರ ಪೊಲೀಸ್ ತರಬೇತಿ ಶಾಲೆಯನ್ನು ಬಳ್ಳಾರಿ ತಾಲ್ಲೂಕು ಮೀನಹಳ್ಳಿ (ಹಗರಿ)ಗೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ ಹಾಗೂ ಹೂವಿನ ಹಡಗಲಿಯಲ್ಲಿ ಕಟ್ಟಡ ನಿರ್ಮಾಣಕ್ಕೆ ಬಿಡುಗಡೆ ಮಾಡಿರುವ ರೂ 6.00 ಕೋಟಿಗಳ ಅನುದಾನದಲ್ಲಿ ಕಟ್ಟಡ ನಿರ್ಮಾಣ ಕೈಗೆತ್ತಿಕೊಳ್ಳಲು ಅನುಮೋದನೆ ನೀಡಿರುತ್ತದೆ.

ತರುವಾಯ ಪೊಲೀಸ್ ಮಹಾ ನಿರ್ದೇಶಕರು (ತರಬೇತಿ) ಇವರು ಮೀನಹಳ್ಳಿ (ಹಗರಿ) ಇಲ್ಲಿ ಸಶಸ್ತ್ರ ಪೊಲೀಸ್ ತರಬೇತಿ ಶಾಲೆಯ ನಿರ್ಮಾಣವನ್ನು ಅನುಮೋದಿತ ರೂ. 16.4 ಕೋಟಿಗಿಂತ ರೂ 70.00 ಕೋಟಿ ಅಧಿಕ ವೆಚ್ಚದಲ್ಲಿ ನಿರ್ಮಾಣ ಮಾಡುವ ಪ್ರಸ್ತಾವನೆಯನ್ನು ಕಳುಹಿಸಿದ್ದು, ಈ ಮಧ್ಯೆ ಸಂಬಂಧವಿಲ್ಲದ ಮತ್ತೊಂದು ವಿಷಯದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಕೆ.ಎಸ್.ಆರ್.ಪಿ.) ಬೆಂಗಳೂರು ಇವರು ತಮ್ಮ ದಿನಾಂಕ 23–07–2011ರ ಪತ್ರದಲ್ಲಿ ಕೋರಿದಂತೆ ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 120 ಪಿಓಪಿ 2007, ದಿನಾಂಕ 12–08–2008ರಲ್ಲಿ ಬೆಂಗಳೂರಿನಲ್ಲಿನ ಸಶಸ್ತ್ರ ಮೀಸಲು ಪೊಲೀಸ್ ಪಡೆಯನ್ನು ಕೊಪ್ಪಳ ತಾಲ್ಲೂಕಿನ ಮುನಿರಾಬಾದ್ ಹೋಬಳಿ, ಹೊಸಹಳ್ಳಿ ಗ್ರಾಮಕ್ಕೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದ್ದು, ಸದರಿ ಜಾಗದಲ್ಲಿ ಆಡಳಿತಾತ್ಮಕ ಕಚೇರಿ, ಆರ್ಮರಿ, ಎಂ.ಟಿ. ಗ್ಯಾರೇಜ್, ಸ್ಟೋರ್ಸ್, ಲೆಕ್ಚರ್ ಹಾಲ್, ವೆಲ್‌ಫೇರ್ ಸೆಂಟರ್, ಅಬ್‌ಸ್ಟಕಲ್ಸ್ ಮುಂತಾದ ನಿರ್ಮಾಣಕ್ಕಾಗಿ 12ನೇ ಹಣಕಾಸು ಆಯೋಗದಡಿಯಲ್ಲಿ ರೂ. 3.00 ಕೋಟಿ ನೀಡಿರುತ್ತಾರೆ. ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ಇವರು ತಯಾರಿಸಿದ ಅಂದಾಜಿನ ಪ್ರಕಾರ ಒಟ್ಟು ಅಂದಾಜು ವೆಚ್ಚವು ರೂ. 13,74,00,626/–ಗಳಾಗುವುದರಿಂದ ಹೆಚ್ಚುವರಿಯಾಗಿ ರೂ. 10,74,00,626/–ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಹೂವಿನ ಹಡಗಲಿ/ಮೀನಹಳ್ಳಿಯಲ್ಲಿ ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಕೇಂದ್ರ ನಿರ್ಮಾಣಕ್ಕಾಗಿ ಅನುಮೋದಿಸಿದ ಅನುದಾನವನ್ನು ಮುನಿರಾಬಾದ್‌ನಲ್ಲಿ ನಿರ್ಮಿಸಲಾಗುತ್ತಿರುವ ಕೆ.ಎಸ್.ಆರ್.ಪಿ. ತರಬೇತಿ ಶಾಲೆಗೆ ತಿರುವು (divert) ಮಾಡುವ ಕುರಿತು ದಿನಾಂಕ 19–10–2011ರಂದು ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಪೊಲೀಸ್ ಮಹಾ ನಿರ್ದೇಶಕರು (ತರಬೇತಿ) ಮತ್ತು ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ದಾವಣಗೆರೆ ಇವರ ಉಪಸ್ಥಿತಿಯಲ್ಲಿ ಚರ್ಚಿಸಿದ ಸಮಯದಲ್ಲಿ ಆರಂಭದಲ್ಲಿ ಹೂವಿನ ಹಡಗಲಿಯಲ್ಲಿನ ಸಶಸ್ತ್ರ ಮೀಸಲು ಪೊಲೀಸ್ ಪಡೆಗೆ ತರಬೇತಿ ಕೇಂದ್ರದ ನಿರ್ಮಾಣದ ಯೋಜನೆಯ ಅಂದಾಜು, ಇತ್ಯಾದಿ ತಯಾರಿಸಲಾದ ರೂ. 16.4 ಕೋಟಿ ವೆಚ್ಚದಲ್ಲಿ, ಬಜೆಟ್ ಹಂಚಿಕೆ ಮಾಡಲು ಆರ್ಥಿಕ ಇಲಾಖೆಯು ಅನುಮೋದನೆ ನೀಡಿದ್ದು, ಕೆಲಸದ ಕಾಮಗಾರಿ ಪ್ರಾರಂಭಿಸುವ ಹಂತದಲ್ಲಿದ್ದ ಸಮಯದಲ್ಲಿ ಬಳ್ಳಾರಿ ಜಿಲ್ಲೆಗೆ ಸ್ಥಳಾಂತರಿಸಲು ತೀರ್ಮಾನ ತೆಗೆದುಕೊಳ್ಳಲಾಗಿದೆ. ಅದರಂತೆ ಸಶಸ್ತ್ರ ಮೀಸಲು ಪೊಲೀಸ್ ಪಡೆಯ ತರಬೇತಿ ಕೇಂದ್ರವನ್ನು ಮೀನಹಳ್ಳಿ (ಹಗರಿ) ಇಲ್ಲಿಗೆ ಸ್ಥಳಾಂತರಿಸಲಾಗಿದೆ. ಆದ್ದರಿಂದ ಹಂಚಿಕೆಯಾದ ರೂ. 16.4 ಕೋಟಿ ಅನುದಾನವು ವೆಚ್ಚವಾಗದೇ ಉಳಿದಿದ್ದು, ರೂ. 6.00 ಕೋಟಿಗಳನ್ನು ಮಾತ್ರ ಬಿಡುಗಡೆ ಮಾಡಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಕಟ್ಟಡವನ್ನು ನಿರ್ಮಾಣ ಮಾಡಲು 86.16 ಎಕರೆ ಜಾಗವನ್ನು ಮೀನಹಳ್ಳಿ ಗ್ರಾಮದಲ್ಲಿ ಹಂಚಿಕೆಯಾಗಿರುತ್ತದೆ. ಇದು ಬಳ್ಳಾರಿಯಿಂದ ಸುಮಾರು 16 ಕಿ.ಮೀ. ದೂರದಲ್ಲಿರುವುದರಿಂದ ಸದರಿ ಸ್ಥಳದಲ್ಲಿ ತರಬೇತಿ ಕೇಂದ್ರದ ಕಟ್ಟಡವನ್ನು ನಿರ್ಮಿಸಲು ಯೋಗ್ಯವಲ್ಲವೆಂದು ಕಂಡುಬಂದಿರುತ್ತದೆ. ಅಡಿಪಾಯದ ಆಳ ಬಿಂದು, ಸುತ್ತಮುತ್ತಲ ಪ್ರದೇಶವನ್ನು

ಹಾವೇರಿ ನದಿ ನೀರಿನ inundation ನಿಂದ ಮತ್ತು ಕಾಮಗಾರಿಯನ್ನು ಒತ್ತಡದಿಂದ ಪ್ರಾರಂಭಿಸಲಾಗಿರುತ್ತದೆ. ಅದು ಅಲ್ಲಿ ನಿರ್ಮಿಸಲು ಕಟ್ಟಾಜ್ಞೆ (mandate) ಇದ್ದ ಪ್ರಯುಕ್ತ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತವು ಸದರಿ ಜಾಗಕ್ಕೆ ಸರಿಹೊಂದುವ ವಿನ್ಯಾಸವನ್ನು ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು ಇಲ್ಲಿನ ನುರಿತ ಪ್ರಾಧ್ಯಾಪಕರ ಸಲಹೆ ಪಡೆದು ಅವರ ಸೂಚನೆ ಮೇರೆಗೆ ವಿಶೇಷ ಅಡಿಪಾಯ ಹಾಕಲಾಗಿರುವುದರಿಂದ ಅಧಿಕ ವೆಚ್ಚವಾಗಿರುತ್ತದೆ. ಈ ಚಿಕಿತ್ಸೆಯೊಂದಿಗೆ ನಿಗಮವು ನಾಲ್ಕು ಕಟ್ಟಡಗಳ ಕಾಮಗರಿಯನ್ನು ಪ್ರಾರಂಭಿಸಿದೆ ಎರಡು ಡಿವೈಎಸ್‌ಪಿ ವಸತಿ ಗೃಹ, ಒಂದು ಪ್ರಾಂಶುಪಾಲರ ವಸತಿ ಗೃಹ ಹಾಗೂ ಆಡಳಿತ ಕಛೇರಿ ಕಟ್ಟಡವನ್ನು ರೂ. 4.8 ಕೋಟಿಗಳ ಅಂದಾಜು ವೆಚ್ಚ ನಿರ್ಮಿಸಲಾಗುತ್ತಿದೆ. ಈ ನಾಲ್ಕು ಕಾಮಗಾರಿಗಳು ಚಾವಣಿ/ಹಾಸುಗಲ್ಲು ಮಟ್ಟಕ್ಕೆ ಬಂದಿದ್ದು, ಇಲ್ಲಿಯವರೆಗೆ ರೂ. 2.2 ಕೋಟಿಗಳನ್ನು ಖರ್ಚು ಮಾಡಲಾಗಿದೆ. ಈ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಪೊಲೀಸ್ ಮಹಾ ನಿರ್ದೇಶಕರು (ತರಬೇತಿ) ಇವರು ಸಲ್ಲಿಸಿರುವ ಪರಿಷ್ಕೃತ ಅಂದಾಜಿನಂತೆ ಮೀನಹಳ್ಳಿಯಲ್ಲಿ ಸಶಸ್ತ್ರ ಪೊಲೀಸ್ ತರಬೇತಿ ಶಾಲೆಯ ಕಟ್ಟಡದ ನಿರ್ಮಾಣವನ್ನು ಅನುಮೋದಿತ ರೂ. 16.4 ಕೋಟಿಗಳಿಗೆ ಬದಲಾಗಿ ರೂ. 70.00 ಕೋಟಿಗಳ ವೆಚ್ಚದಲ್ಲಿ ಕೈಗೆತ್ತಿಕೊಂಡಲ್ಲಿ ಅಡಿಪಾಯಕ್ಕೆ ವಿಶೇಷ ಚಿಕಿತ್ಸೆ ನೀಡಬೇಕಾಗಿದ್ದು, ಇದರಿಂದ ಒಟ್ಟು ಅಂದಾಜು ವೆಚ್ಚವು ಇನ್ನೂ ದುಬಾರಿಯಾಗುವುದು ಗಮನಕ್ಕೆ ಬರುತ್ತದೆ. ಎರಡನೆಯದಾಗಿ ಜಾಗವು ಸೂಕ್ತವಾಗಿರುವುದಿಲ್ಲ ಅಲ್ಲದೆ ನೈಟ್ ಮತ್ತು ಬಳ್ಳಾರಿ ನಗರ ನಡುವಿನ ಅಂತರವು ತೊಂದರೆದಾಯಕವಾಗಿರುವುದು ಮತ್ತೊಂದು ಅಂಶವಾಗಿರುತ್ತದೆ. ಆದ್ದರಿಂದ ಪೊಲೀಸ್ ಸಿಬ್ಬಂದಿ (ವಿಶೇಷವಾಗಿ ತರಬೇತಿ ವಿಭಾಗದಿಂದ) ಸಶಸ್ತ್ರ ಪೊಲೀಸ್ ತರಬೇತಿ ಕೇಂದ್ರವನ್ನು ಮೀನಹಳ್ಳಿಯಿಂದ ಸ್ಥಳಾಂತರಿಸತಕ್ಕದೆಂಬ ತೀರ್ಮಾನಕ್ಕೆ ಬಂದಿರುತ್ತದೆ. ಮುಂದುವರೆದು ಈಗಾಗಲೇ ಹೂವಿನ ಹಡಗಲಿಗೆ ಅನುಮೋದನೆ ನೀಡಿದ ರೂ. 16.4 ಕೋಟಿಗಳಿಗೆ ಮೀರಿ ರೂ. 70.00 ಕೋಟಿಗಳ ಇನ್ನೂ ಹೆಚ್ಚಿನ ಆರ್ಥಿಕ ವಿತರಣೆಗೆ ಆರ್ಥಿಕ ಇಲಾಖೆಯು ಅನುಮೋದನೆ ನೀಡಿರುವುದಿಲ್ಲ. ಆದ್ದರಿಂದ ತೊಂದರೆದಾಯಕವಾಗಿರುವ ಜಾಗದಲ್ಲಿ ಹೆಚ್ಚು ಹಣ ವೆಚ್ಚ ಮಾಡುವುದರ ಬದಲು ಬೇರೆ ಸ್ಥಳಕ್ಕೆ ಸ್ಥಳಾಂತರಿಸುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ. ಇದೇ ರೀತಿ ಮುನಿರಾಬಾದ್‌ನಲ್ಲಿರುವ ಕೆ.ಎಸ್.ಆರ್.ಪಿ. (ತರಬೇತಿ ಕೇಂದ್ರ) ಕಟ್ಟಡದ ಕಾಮಗಾರಿಯು ನಿಧಿಗಳ ಕೊರತೆಯಿಂದ ಅಪೂರ್ಣವಾಗಿರುವುದು ಕಂಡು ಬಂದಿರುತ್ತದೆ. ಆದ್ದರಿಂದ ಮುನಿರಾಬಾದ್‌ನಲ್ಲಿ ನಿರ್ಮಾಣದ ಮುಂದುವರಿದ ಹಂತದಲ್ಲಿರುವ ಕಟ್ಟಡಗಳನ್ನು ಪೂರ್ಣಗೊಳಿಸಲು ಮೀನಹಳ್ಳಿಗೆ ಅನುಮೋದಿಸಿರುವ ಅನುದಾನದಲ್ಲಿ ಉಳಿದಿರುವ ಅನುದಾನವನ್ನು ಬೇರೆ ಕಡೆಗೆ ತಿರುಗಿಸಲು (divert) ತೀರ್ಮಾನ ತೆಗೆದುಕೊಂಡಿರುತ್ತದೆ ಮತ್ತು 13ನೇ ಆರ್ಥಿಕ ಆಯೋಗದ ನಿಧಿಯಡಿಯಲ್ಲಿ ಬೆಂಗಳೂರಿನಲ್ಲಿ ಸಶಸ್ತ್ರ ಮೀಸಲು ತರಬೇತಿ ಕೇಂದ್ರದ ಕಾಮಗಾರಿಗೆ ಅನುಮೋದನೆಗೊಂಡಿರುವ ಕಾರಣ ಮತ್ತೊಂದು ಸಶಸ್ತ್ರ ಮೀಸಲು ತರಬೇತಿ ಕೇಂದ್ರದ ಕಾಮಗಾರಿ ಕಟ್ಟಡವನ್ನು ನಿರ್ಮಿಸದಿರಲು ತೀರ್ಮಾನ ತೆಗೆದುಕೊಂಡಿರುತ್ತದೆ.

ಆದ್ದರಿಂದ ಅನುಮೋದನೆಗೊಂಡಿರುವ ರೂ. 16.4 ಕೋಟಿಗಳ ಪೈಕಿ ಇಂದಿನ ತನಕ ಮೀನಹಳ್ಳಿಯಲ್ಲಿ ನಾಲ್ಕು ಕಾಮಗಾರಿಗಳ ಕಟ್ಟಡಗಳ ನಿರ್ಮಾಣಕ್ಕೆ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತವು ಮಾಡಿರುವ ವೆಚ್ಚವು ರೂ. 2.2 ಕೋಟಿಗಳಾಗಿರುತ್ತದೆ. ಟೆಂಡರ್‌ನಲ್ಲಿ ಹೂಡಲಾದ ಅಂದಾಜು ಮೊತ್ತವು ಒಟ್ಟು ರೂ. 4.8 ಕೋಟಿಯಾಗಿರುತ್ತದೆ. ಆದ್ದರಿಂದ ಈ ನಾಲ್ಕು ಕಾಮಗಾರಿಗಳ ಅನುಮೋದಿತ ಅಂದಾಜಿನಂತೆ ಪೂರ್ಣಗೊಳಿಸಲು ಹಾಗೂ ಅವುಗಳನ್ನು ಇತರೆ ಉದ್ದೇಶಕ್ಕಾಗಿ ಸೂಕ್ತತೆ ಮಾಡಿ ಮುಂದೆ ಉಪಯೋಗಿಸಿಕೊಳ್ಳಲು ತೀರ್ಮಾನಿಸಿರುತ್ತದೆ. ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಕೇಂದ್ರ ನಿರ್ಮಾಣಕ್ಕೆ ಹಂಚಿಕೆಯಾಗಿರುವ ರೂ. 16.4 ಕೋಟಿಗಳ ಪೈಕಿ ರೂ. 4.8 ಕೋಟಿಗಳನ್ನು ವೆಚ್ಚಮಾಡಿದ ಪಕ್ಷದಲ್ಲಿ ರೂ. 11.60 ಕೋಟಿಗಳ ಉಳಿತಾಯಕ್ಕೆ ಕಾರಣವಾಗುತ್ತದೆ. ಪೊಲೀಸ್ ಮಹಾ ನಿರ್ದೇಶಕರು (ತರಬೇತಿ) ಮತ್ತು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕೆ.ಎಸ್.ಆರ್.ಪಿ. ಇವರುಗಳು ಕೋರಿದಂತೆ ಈ ಉಳಿತಾಯದಲ್ಲಿ ರೂ. 5.00 ಕೋಟಿಗಳ ಅನುದಾನವನ್ನು ಮುನಿರಾಬಾದ್‌ನಲ್ಲಿ ನಿರ್ಮಿಸುತ್ತಿರುವ ಅಪೂರ್ಣ ಕಟ್ಟಡ ಕಾಮಗಾರಿಗಳನ್ನು ಪೂರ್ಣ ಮಾಡಲು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ. ಆದಾಗ್ಯೂ ಮುನಿರಾಬಾದ್‌ನಲ್ಲಿ ನಿರ್ಮಿಸಲಾಗುತ್ತಿರುವ ಕಾಮಗಾರಿಗಳ ಸ್ವತಂತ್ರ ಸಮಾಲೋಚಕರಿಂದ ಪರಿಶೀಲನೆ ಮಾಡತಕ್ಕದ್ದು. ಅಂತಯೇ ಮೀನಹಳ್ಳಿ (ಹಗರಿ) ಇಲ್ಲಿ ಪೂರ್ಣಗೊಳಿಸಲು ಉದ್ದೇಶಿಸಿರುವ ನಾಲ್ಕು ಕಾಮಗಾರಿಗಳ ಕಟ್ಟಡಗಳನ್ನು ಸರ್ಕಾರಿ ಕಾಲೇಜು, ಊಟದ ವಸತಿ ನಿಲಯ, ಶಾಲೆಯ ಕಟ್ಟಡ ಅಥವಾ ಇನ್ನಾವುದೇ ಉದ್ದೇಶಕ್ಕಾಗಿ ಬಳಸುವ ಬಗ್ಗೆ ಅನ್ವೇಷನೆ ಮಾಡಲು ತೀರ್ಮಾನ ತೆಗೆದುಕೊಳ್ಳಲಾಗಿದೆ. ಅದರಂತೆ ಈ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 66 ಪಿಬಿಎಲ್ 2011, ಬೆಂಗಳೂರು, ದಿನಾಂಕ 03-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ (1) ಮೀನಹಳ್ಳಿ/ಹಗರಿ ಇಲ್ಲಿ ಅಪೂರ್ಣಗೊಂಡಿರುವ ನಾಲ್ಕು ಕಾಮಗಾರಿಗಳನ್ನು ಅನುಮೋದಿತ ಅಂದಾಜು ವೆಚ್ಚ ರೂ. 4.8 ಕೋಟಿಗಳ ವೆಚ್ಚದಲ್ಲಿ ಪೂರ್ಣಗೊಳಿಸಲು ಮತ್ತು ಉದ್ದೇಶಿಸಿದ ನಾಲ್ಕು ಕಟ್ಟಡಗಳನ್ನು ಸರ್ಕಾರಿ ಕಾಲೇಜು ಹಾಸ್ಟಲ್, ಶಾಲೆ ಕಟ್ಟಡ ಅಥವಾ ಇನ್ನಾವುದೇ ಉದ್ದೇಶಕ್ಕಾಗಿ ಬಳಸುವ ಬಗ್ಗೆ ಸರ್ಕಾರವು ಅನ್ವೇಷಣೆ ಮಾಡಲು ಮಂಜೂರಾತಿ ನೀಡಿದೆ, ಮುಂದುವರಿದು ಹೂವಿನ ಹಡಗಲಿ/ಮೀನಹಳ್ಳಿಯಲ್ಲಿ ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಕೇಂದ್ರ ನಿರ್ಮಾಣಕ್ಕಾಗಿ ಅನುಮೋದಿಸಿದ ಅನುದಾನದಲ್ಲಿ ರೂ. 5.00 ಕೋಟಿಗಳ ಅನುದಾನವನ್ನು ಬೇರೆ ಕಡೆಗೆ ತಿರುವು (divert) ಮೂಲಕ ಮುನಿರಾಬಾದ್‌ನಲ್ಲಿ ನಿರ್ಮಿಸಲಾಗುತ್ತಿರುವ ಅಪೂರ್ಣ ಕಟ್ಟಡಗಳನ್ನು ಪೂರ್ಣಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ ಹಾಗೂ ಸದರಿ ಕಟ್ಟಡಗಳ ಕಾಮಗಾರಿಯ ಸ್ಥಿತಿಯನ್ನು ಸ್ವತಂತ್ರ ಸಮಾಲೋಚಕರ ಪರಶೀಲನೆಗೆ ಒಳಪಡಿಸುವ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ಆದೇಶಿಸಿದೆ.

ಈ ಹಿಂದೆ ಹೂವಿನ ಹಡಗಲಿಗೆ ಅನುಮೋದಿಸಿದ್ದ ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಕೇಂದ್ರವನ್ನು ಹಾಗೂ ತದನಂತರ ಮೀನಹಳ್ಳಿಗೆ ವರ್ಗಾಯಿಸಿರುವುದನ್ನು ರದ್ದುಗೊಳಿಸಲು ಸಹ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 367 ವೆಚ್ಚ 11/2011 ದಿನಾಂಕ 10-01-2012ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್. 767

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ.ಎನ್. ಮಾದಯ್ಯ, ಪಿ.ಐ. ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ ಮೈಸೂರು ಇವರ ಪರಿಷ್ಕರಣ ಮೇಲ್ಮನವಿ ಬಗ್ಗೆ ಅಂತಿಮ ಆದೇಶ.–

**ಓದಲಾಗಿದೆ :** 1)ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಅಬಕಾರಿ ಜಾರಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಐಜಿಪಿ/ಅಲಾನಿ/ಸಿಬ್ಬಂದಿ/90/2008–09, ದಿನಾಂಕ 30–01–2010.

2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)148/2009–10, ದಿನಾಂಕ 03–12–2010.

3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 30–05–2011

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ(8)148/2009–10, ದಿನಾಂಕ 05–08–2011.

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 160 ಸಿಎನ್‌ಎಸ್ 11, ದಿನಾಂಕ 06–02–2012.

**ಪ್ರಸ್ತಾವನೆ :**

ಶ್ರೀ ಕೆ. ಎನ್. ಮಾದಯ್ಯ, ಪಿ.ಐ., ಇವರು ಮಂಡ್ಯ ಜಿಲ್ಲೆಯ ಪಾಂಡವಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ ತೋರಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಮಂಡ್ಯ ಜಿಲ್ಲೆಯ ಪಾಂಡವಪುರ ಪೊಲೀಸ್ ಠಾಣೆಯ ಮೋ.ಸಂ. 160/2008, ಕಲಂ 457–380 ಐಪಿಸಿಗೆ ಸಂಬಂಧಪಟ್ಟಂತೆ ಶ್ರೀಮತಿ ಮುಬೀನಾ ಕೋಂ ಲೇಟ್ ಸಿಬಾತುಲ್ಲಾ ಗಾಂಧೀನಗರ, ಮೈಸೂರು ನಗರ ರವರ ಮಗ ರೆಹಮತುಲ್ಲಾನನ್ನು ದಸ್ತಗಿರಿ ಮಾಡಿದ ಬಗ್ಗೆ ನೀಡಿದ ಅರ್ಜಿಯ ವಿಚಾರಣೆ ನಡೆಸಿದ ಅಪರ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ರವರು

ಶ್ರೀ ಕೆ.ಎನ್. ಮಾದಯ್ಯ, ಪಿ.ಐ. ರವರು ಕರ್ತವ್ಯ ನಿರ್ಲಕ್ಷತೆಯನ್ನು ತೋರಿಸಿರುತ್ತಾರೆಂದು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ಸದರಿ ವರದಿಯನ್ನು ಪರಿಶೀಲಿಸಿದಾಗ ನೀವು ಇಲಾಖೆಯ ಶಿಸ್ತಿನ ಅಧಿಕಾರಿಯಾಗಿ ಅತೀವ ಕರ್ತವ್ಯ ನಿರ್ಲಕ್ಷತೆ ತೋರ್ಪಡಿಸಿರುವುದು ಕಂಡು ಬರುತ್ತದೆ."

ಅ.ಪೊ.ಅ. ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಅಬಕಾರಿ ಜಾರಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 30–01–10ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 03–12–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಅಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 55 ಪೊಸಿಅ 2011, ಬೆಂಗಳೂರು, ದಿನಾಂಕ 23–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ (25) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ,

ಶ್ರೀ ಕೆ. ಮಾದಯ್ಯ ಪಿ.ಐ. ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ ಮೈಸೂರು, ಇವರಿಗೆ ದಿನಾಂಕ 30–01–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸಿ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 768 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಲ್. ವೇಣುಗೋಪಾಲ್, ನಿವೃತ್ತ ಪಿ.ಎಸ್.ಐ., ಏರ್‌ಪೋರ್ಟ್ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.–

**ಓದಲಾಗಿದೆ :** 1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ ಡಿಇ (2)/ಸಿಓಪಿ/102/ಆರ್.7/08, ದಿನಾಂಕ 14–5–2009.

2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (4)/41/2009–10 (ಓ.ಬಿ. ಸಂಖ್ಯೆ: 4/2010–11) ದಿನಾಂಕ 21–4–2010.

3) ಅರ್ಜಿದಾರರು ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 03–01–2011

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು (2)/84/2010–11, ದಿನಾಂಕ 28–02–2011.

**ಪ್ರಸ್ತಾವನೆ :**

ಶ್ರೀ ಎಲ್. ವೇಣುಗೋಪಾಲ್, ಪಿ.ಎಸ್.ಐ. (ಹಾಲಿ ನಿವೃತ್ತಿ) ಇವರು ಈ ಹಿಂದೆ ಬೆಂಗಳೂರಿನ ಜೆ.ಪಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> " ಶ್ರೀ ಎಲ್. ವೇಣುಗೋಪಾಲ್, ಪಿ.ಎಸ್.ಐ., ಏರ್‌ಪೋರ್ಟ್ ಪೊಲೀಸ್ ಠಾಣೆ, ಈ ಹಿಂದೆ ಜೆ.ಪಿ. ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಈ ಕಛೇರಿಯ ಜ್ಞಾಪನ ಸಂಖ್ಯೆ: ಸಿಬ್ಬಂದಿ–1/46/2006, ದಿನಾಂಕ 13–8–2008ರಲ್ಲಿ ನಿಮ್ಮನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಗರ ವಿಶೇಷ ಶಾಖೆಯಿಂದ ಜೆ.ಜೆ.ನಗರ ಪೊಲೀಸ್ ಠಾಣೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಈ ಆದೇಶದನ್ವಯ ಸಹಾಯಕ ಪೊಲೀಸ್ ಕಮೀಷನರ್, ನಗರ ವಿಶೇಷ ಶಾಖೆ, ಬೆಂಗಳೂರು ನಗರ ರವರು ತಮ್ಮ ಜ್ಞಾಪನ ಸಂಖ್ಯೆ: 3/ಸಿಟಿಎಸ್‌ಬಿ/07–08, ದಿನಾಂಕ 14–8–2008ರಲ್ಲಿ ಅಪರಾಹ್ನದಂದು ನಗರ ವಿಶೇಷ ಶಾಖೆಯ ಕರ್ತವ್ಯದಿಂದ ನಿಮ್ಮನ್ನು ಬಿಡುಗಡೆಗೊಳಿಸಿ, ಜೆ.ಜೆ. ನಗರ ಪೊಲೀಸ್ ಠಾಣೆಯಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಿರುತ್ತಾರೆ. ಆದರೆ ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾದ ನೀವು ಸ್ಥಳ ನಿಯುಕ್ತಿಗೊಳಿಸಲಾದ ಠಾಣೆಯಲ್ಲಿ ಇದುವರೆವಿಗೂ ವರದಿ ಮಾಡಿಕೊಳ್ಳದೇ ನಿಮ್ಮ ಹಿರಿಯ ಅಧಿಕಾರಿಗಳ ಆದೇಶವನ್ನು ಪಾಲಿಸದೇ ಅವಿಧೇಯತೆ ತೋರಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಉದಾಸೀನತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 14–5–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ ದಿನಾಂಕ 22–10–08 ರಿಂದ 12–3–2009ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಅದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗು ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 21–4–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸದರಿಯವರು ನಿವೃತ್ತಿ ಹೊಂದುವ ದಿನಾಂಕದವರೆಗೆ ಮುಂದೂಡಲಾಗಿದೆ. ಅಮಾನತ್ತಿನ ಅವಧಿ ದಿನಾಂಕ 22–10–2008 ರಿಂದ 12–3–09 ಅನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 2 ಪೊಸಿಅ 2011, ಬೆಂಗಳೂರು, ದಿನಾಂಕ 27–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಲ್. ವೇಣುಗೋಪಾಲ್, ನಿವೃತ್ತ ಪಿ.ಎಸ್.ಐ. ಏರ್‌ಪೋರ್ಟ್ ಪೊಲೀಸ್ ಠಾಣೆ, ಬೆಂಗಳೂರು. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 769

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ. ಎಸ್. ಚಂದ್ರಶೇಖರ್, ಮಾಜಿ ಪಿ.ಎಸ್.ಐ., ಬ್ಯಾಟರಾಯನಪುರ ಪೊಲೀಸ್ ಠಾಣೆ. ಬೆಂಗಳೂರು ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :** 1)ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಅಪೀಲು(1)/14/2007–2008 (ಓಬಿ ಸಂಖ್ಯೆ: 27/2010–11) ದಿನಾಂಕ 14–10–2010.

2) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 25–11–2010

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (1) 14/2007–2008, ದಿನಾಂಕ 24–12–2010.

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 169 ಸಿಎನ್‌ಎಸ್ 11, ದಿನಾಂಕ 06–02–2012.

**ಪ್ರಸ್ತಾವನೆ :**

ಶ್ರೀ ಬಿ. ಎಸ್. ಚಂದ್ರಶೇಖರ್, ಇವರು ಶಿರಾಳಕೊಪ್ಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ಅಕ್ರಮ ಸಂಭಾವನೆ ಪಡೆದು, ಅಧಿಕಾರ ದುರುಪಯೋಗ ಪಡಿಸಿಕೊಂಡು ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇನ್ನಿಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ 8ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಬಿ. ಎಸ್. ಚಂದ್ರಶೇಖರ, ಆದ ನೀವು ಈ ಹಿಂದೆ ಶಿರಾಳಕೊಪ್ಪ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ., ಆಗಿ ಕರ್ತವ್ಯ ನಿರ್ವಹಿಸಿರುತ್ತೀರಿ. ದಿನಾಂಕ 24–7–2006 ರಂದು ಶ್ರೀಮತಿ ಕುಸುಮಾಬಾಯಿ, ತಂದೆ ಸೋಮ್ಲಾನಾಯ್ಕ ರಾಗಿಕೊಪ್ಪ ತಾಂಡ, ಶಿಕಾರಿಪುರ ತಾಲ್ಲೂಕು, ಇವರು ಶ್ರೀ ಬಿ. ಗಂಗಾನಾಯ್ಕ ಯಾನೆ ಗಂಗಾಧರ ತಂದೆ ಗೋವಿಂದನಾಯ್ಕ ರಾಗಿಕೊಪ್ಪ ತಾಂಡ ಶಿಕಾರಿಪುರ ತಾಲ್ಲೂಕು ಇವರ ವಿರುದ್ಧ ನೀಡಿದ ದೂರು ಅರ್ಜಿಗೆ ಸಂಬಂಧಿಸಿದಂತೆ ಶ್ರೀ ಬಿ. ಗಂಗಾನಾಯ್ಕ ಇವರಿಗೆ ಸಹಾಯ ಮಾಡಲು ಮತ್ತು ಕೇಸು ಇಲ್ಲದಂತೆ ಮಾಡಲು ನೀವು ಠಾಣೆಯ ಹೆಚ್. ಸಿ.–669, ಶ್ರೀ ನಿಂಗಪ್ಪ ಮತ್ತು ಸಿಪಿಸಿ–1511, ಶ್ರೀ ದೂದ್ಯಾನಾಯ್ಕ ಇವರೊಂದಿಗೆ ಸೇರಿ ಸದರಿಯವರಿಂದ ರೂ. 5,000/–ಗಳ ಅಕ್ರಮ ಸಂಭಾವನೆಗೆ ಒತ್ತಾಯಿಸಿ ನಂತರ ನಿಮಗೆ ರೂ. 1,000/– ಸಿ.ಹೆಚ್.ಸಿ.–669, ಶ್ರೀ ನಿಂಗಪ್ಪರವರಿಗೆ 300/– ಮತ್ತು ಸಿಪಿಸಿ 1511, ಶ್ರೀ ದೂದ್ಯನಾಯಕ್ ರವರಿಗೆ ರೂ. 200/–ರ ಅಕ್ರಮ ಸಂಭಾವನೆಯನ್ನು ದಿನಾಂಕ 27–7–2006 ರಂದು ಬೆಳಿಗ್ಗೆ ತೆಗೆದುಕೊಡುವಂತೆ ಒತ್ತಾಯಿಸಿರುತ್ತೀರಿ ಮತ್ತು ನೀವು ದಿನಾಂಕ 27–7–2006 ರಂದು ಶ್ರೀ ಬಿ. ಗಂಗಾನಾಯ್ಕ ಇವರಿಂದ ಈ ಸಂಬಂಧ ರೂ. 1000/–ಗಳ ಅಕ್ರಮ ಸಂಭಾವನೆಯನ್ನು ನಿಮ್ಮ ವಾಸದ ಮನೆಯಲ್ಲಿ ಕೇಳಿ ಪಡೆದು, ಶಿವಮೊಗ್ಗ ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ನಂ. 6/06 ಕಲಂ, 7,13(1)ಲ ರೆ.ವಿ. 13(2)ಲಂಚ ನಿರೋಧಕ ಕಾಯ್ದೆ 1988ರ ಪ್ರಕರಣದಲ್ಲಿ ಆರೋಪಿಯಾಗಿರುತ್ತೀರಿ. ಸರ್ಕಾರಿ ನೌಕರರಾದ ನೀವು ದೂರು ಅರ್ಜಿಗೆ ಸಂಬಂಧಿಸಿದಂತೆ ಶ್ರೀ ಗಂಗಾನಾಯ್ಕ ಇವರಿಗೆ ಸರ್ಕಾರಿ ಕೆಲಸದಲ್ಲಿ ನಿಮ್ಮ ಅಧಿಕಾರದ ಪ್ರಭಾವವನ್ನು ಬೀರಿ ಸಹಾಯ ಮಾಡುವ ಸಲುವಾಗಿ ಅಕ್ರಮ ಸಂಭಾವನೆಗೆ ಒತ್ತಾಯಿಸಿ ಮತ್ತು ಅಕ್ರಮ ಸಂಭಾವನೆಯನ್ನು ಪಡೆದು ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಎಸಗಿರುತ್ತೀರಿ."

ಇಲಾಖಾ ವಿಚಾರಣೆಯಲ್ಲಿ ಅ.ಪೊ.ಅ. ರವರ ವಿರುದ್ಧ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದು, ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 14–10–10ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಲಾಗಿದೆ. ದಿನಾಂಕ 27–07–2006 ರಿಂದ 01–03–2007ರ ವರೆಗಿನ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದ್ದು, ಅರ್ಜಿದಾರರು ಸರ್ಕಾರದಲ್ಲಿ ಸಲ್ಲಿಸಿರುವ ಒಟ್ಟು ಸೇವೆಯನ್ನು ಗಣನೆಗೆ ತೆಗೆದುಕೊಂಡು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತು ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 175 ಪೊಸಿಅ 2010, ಬೆಂಗಳೂರು, ದಿನಾಂಕ 23–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ (25)(ಬಿ)(ii) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ. ಎಸ್. ಚಂದ್ರಶೇಖರ್, ಮಾಜಿ ಪಿ.ಎಸ್.ಐ., ಶಿರಾಳಕೊಪ್ಪ ಇವರಿಗೆ ದಿನಾಂಕ 14–10–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರನ್ನು ಸೇವೆಯಿಂದ "ಕಡ್ಡಾಯ ನಿವೃತ್ತಿ"ಗೊಳಿಸಿ ದಿನಾಂಕ 27–07–2006 ರಿಂದ 01–03–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 770

**ಒಳಾಡಳಿತ ಸಚಿವಾಲಯ**

**ವಿಷಯ :** 1991ರ ಕಾವೇರಿ ಗಲಭೆಯಲ್ಲಿ ನೊಂದ ಸಂತ್ರಸ್ತರಿಗೆ ಪರಿಹಾರವನ್ನು ಮಂಜೂರು ಮಾಡುವ ಬಗ್ಗೆ.-

**ಓದಲಾಗಿದೆ :** 1)ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆರವರ ಪತ್ರ ಸಂಖ್ಯೆ: ಎಂಎಜಿ (1)/ಎಂಎಲ್ಒ /188/2007-08, ದಿನಾಂಕ 18-10-2011.

2) ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆಯವರ ಪತ್ರ ಸಂಖ್ಯೆ: ಎಂಎಜಿ/(1)/ಎಂಎಲ್ಒ/70/2010-11, ದಿನಾಂಕ 29-10-2011.

3) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆರವರ ಪತ್ರ ಸಂಖ್ಯೆ: ಎಂಎಜಿ(4)/ಮಿಸ್/ಸಿಆರ್/138/2008-09, ದಿನಾಂಕ 20-09-2011.

4) ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆರವರ ಪತ್ರ ಸಂಖ್ಯೆ: ಎಂಎಜಿ(2)/197/2011-12, ದಿನಾಂಕ 21-12-2011.

**ಪ್ರಸ್ತಾವನೆ :**

ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಗಳ ತಮಿಳು ಸಂಘಗಳ ಒಕ್ಕೂಟವು ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸಿ, 1991ರ ಕಾವೇರಿ ಗಲಭೆಯ ಸಂದರ್ಭದಲ್ಲಿ ನೊಂದ ಸಂತ್ರಸ್ತರಿಗೆ ಪರಿಹಾರ ನೀಡಲು ಒತ್ತಾಯಿಸಿ ಸಲ್ಲಿಸಿದ್ದ ಮನವಿ ಮೇರೆಗೆ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಓದಲಾದ ಕ್ರಮ ಸಂಖ್ಯೆ (1), ದಿನಾಂಕ 18-10-2011ರ ಪತ್ರದಲ್ಲಿ ಸಂಘದವರು ಸಲ್ಲಿಸಿದ್ದ ಮನವಿಯನ್ನು ಪರಿಶೀಲಿಸಿ, ಮೈಸೂರು ಜಿಲ್ಲೆಗೆ ಸಂಬಂಧಪಟ್ಟಂತೆ 24 ಜನ ಸಂತ್ರಸ್ತರಿಗೆ ಒಟ್ಟು ರೂ. 3,23,100.00 ಪರಿಹಾರ ನೀಡಬೇಕಾಗಿದ್ದು, ಇದರಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ರೂ. 2,39,900/-ಗಳು ಲಭ್ಯವಿದ್ದು, ಉಳಿದ ರೂ. 83,200/-ಗಳನ್ನು ಸರ್ಕಾರದಿಂದ ಮಂಜೂರು ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರು ಓದಲಾದ ಕ್ರಮ ಸಂಖ್ಯೆ(2), ದಿನಾಂಕ 29-10-2011ರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆಗೆ ಸೇರಿದ ವಿವಿಧ ತಾಲ್ಲೂಕುಗಳ ಸಂತ್ರಸ್ತರಲ್ಲಿ 09 ಜನ ಸಂತ್ರಸ್ತರಿಗೆ ಒಟ್ಟು ರೂ. 1,27,700/- ಗಳನ್ನು ಮಂಜೂರು ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಂಗಳೂರುನಗರ ಜಿಲ್ಲೆ ಇವರು ಓದಲಾದ ಕ್ರಮ ಸಂಖ್ಯೆ (3) ದಿನಾಂಕ 20-09-2011ರ ಪತ್ರದಲ್ಲಿ ಅರ್ಜಿದಾರರಾದ ಶ್ರೀ ಪೆರಿಯಾಸ್ವಾಮಿ ಬಿನ್ ಕರುಪ್ಪಗೌಂಡರ್‌ರವರಿಗೆ ಪರಿಹಾರ ನೀಡುವ ಬಗ್ಗೆ ಪರಿಶೀಲಿಸಿ, ಸದರಿಯವರಿಗೆ ರೂ. 80.000/-ಗಳ ಪರಿಹಾರವನ್ನು ಮಂಜೂರು ಮಾಡಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರು ಓದಲಾದ ಕ್ರಮ ಸಂಖ್ಯೆ (4), ದಿನಾಂಕ 21-12-2011ರ ಪತ್ರದಲ್ಲಿ ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ, 1991ರ ಕಾವೇರಿ ಗಲಭೆಯಲ್ಲಿ ನೊಂದ 84 ಜನ ಸಂತ್ರಸ್ತರಿಗೆ ರೂ. 4,05,900/- ಸರ್ಕಾರದಿಂದ ಮಂಜೂರು ಮಾಡಲಾಗಿದ್ದು, ಸದರಿ ಮೊತ್ತವು ರೂ. 4,29,700/-ಗಳಾಗಿದ್ದು, ಅಂದರೆ ಸರ್ಕಾರವು ಮಂಜೂರು ಮಾಡಿರುವ ಒಟ್ಟು ಪರಿಹಾರದ ಧನದಲ್ಲಿ ರೂ. 23,800/- ಕಡಿಮೆಯಾಗಿದ್ದರಿಂದ ಈ ಬಗ್ಗೆ ಹೆಚ್ಚಿನ ಅನುದಾನ ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಈ ಅನುದಾನವನ್ನು ಸರಿದೂಗಿಸಿಕೊಳ್ಳಲು ತಿದ್ದುಪಡಿ ಆದೇಶವನ್ನು ಸರ್ಕಾರವು ದಿನಾಂಕ 23-12-2004ರಲ್ಲಿ ಹೊರಡಿಸಲಾಗಿರುತ್ತದೆ. ಆದರೆ ಈ ಬಗ್ಗೆ ಆರ್ಥಿಕ ಇಲಾಖೆಯಿಂದ ಪ್ರತ್ಯೇಕ ಆದೇಶ ಬಂದಿರುವುದಿಲ್ಲವೆಂದು ತಿಳಿಸಿ, ರೂ. 23,800/-ಗಳ ವ್ಯಾತ್ಯಾಸದ ಮೊತ್ತವನ್ನು ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಚಾಮರಾಜನಗರ ಜಿಲ್ಲೆ, ಬೆಂಗಳೂರು ನಗರ ಜಿಲ್ಲೆ ಮತ್ತು ಮಂಡ್ಯ ಜಿಲ್ಲೆಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ 1991ರ ಕಾವೇರಿ ಗಲಭೆಯಲ್ಲಿ ನೊಂದ ಸಂತ್ರಸ್ತರಿಗೆ ಪರಿಹಾರವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 20 ಸಿಆರ್‌ಆರ್ 2008, ಬೆಂಗಳೂರು, ದಿನಾಂಕ .-02-2012**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿಚಾರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 1991ರ ಕಾವೇರಿ ಗಲಭೆಯಲ್ಲಿ ನೊಂದ ಸಂತ್ರಸ್ತರಿಗೆ ಜಿಲ್ಲಾಧಿಕಾರಿಗಳ ಕೋರಿಕೆಯಂತೆ ಈ ಕೆಳಕಂಡಂತೆ ರೂ. 3,14,700/- (ರೂಪಾಯಿ ಮೂರು ಲಕ್ಷದ ಹದಿನಾಲ್ಕು ಸಾವಿರದ ಏಳುನೂರು ಮಾತ್ರ)ಗಳ ಪರಿಹಾರವನ್ನು ವಿತರಿಸಲು ಅನುದಾನವನ್ನು ಬಿಡುಗಡೆ ಮಾಡಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | 1991ರ ಕಾವೇರಿ ಗಲಭೆಯಲ್ಲಿ ನೊಂದ ಸಂತ್ರಸ್ತರ ಕ್ಲೇಮ್ ಅರ್ಜಿ ಸಂಖ್ಯೆ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|
| 1 | ಮೈಸೂರು | 24 | 83,200.00 |
| 2 | ಚಾಮರಾಜನಗರ | 09 | 1,27,700.00 |
| 3 | ಬೆಂಗಳೂರು ನಗರ | 01 | 80,000.00 |
| 4 | ಮಂಡ್ಯ | – | 23,800.00 |
| | **ಒಟ್ಟು** | **34** | **3,14,700.00** |

2) ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ತಮ್ಮ ಜಿಲ್ಲೆಗೆ ಸಂಬಂಧಿಸಿದ ಅರ್ಜಿದಾರರ ಕ್ಲೇಮ್ ಅರ್ಜಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಅರ್ಹ ಫಲಾನುಭವಿಗಳನ್ನು ಗುರಿತಿಸಿ, ಅವರ ದಾಖಲಾತಿಗಳನ್ನು ಖಚಿತಪಡಿಸಿಕೊಂಡು, ನಿಗದಿಪಡಿಸಿರುವ ಮೊತ್ತಗಳನ್ನು ಬಿಡುಗಡೆ ಮಾಡಲು ನಿರ್ದೇಶಿಸಿದೆ. ತತ್ಸಂಬಂಧ ಕ್ರಮ ಜರುಗಿಸಿದ ಬಗ್ಗೆ ವರದಿಯೊಂದನ್ನು ಸರ್ಕಾರಕ್ಕೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

3) ಮೇಲ್ಕಂಡ ಮೊತ್ತವನ್ನು ಲೆಕ್ಕ ಶೀರ್ಷಿಕೆ "2235-60-200-3-01-100" ಧನಸಹಾಯ/ಪರಿಹಾರದಡಿ 2011-12ನೇ ಸಾಲಿನ ಪೂರಕ ಅಂದಾಜಿನಲ್ಲಿ (2ನೇ ಕಂತಿನ) ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು ಹಾಗೂ ಹಣ ಪಾವತಿಸಿದ್ದಕ್ಕೆ ಬಳಿಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಮೇಲ್ಕಂಡ ಮೊತ್ತವನ್ನು ಅರ್ಹ ಫಲಾನುಭವಿಗಳಿಗೆ ಪರಿಹಾರವನ್ನು ವಿತರಿಸಿರುವ ಬಗ್ಗೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಒಸಾಇ 5984 ಅಂಆಸ 2012, ದಿನಾಂಕ 04-02-2012ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 771 ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

## ಒಳಾಡಳಿತ ಸಚಿವಾಲಯ

**ವಿಷಯ :** ಬೆಂಗಳೂರು ನಗರದಲ್ಲಿರುವ ಎಲ್ಲಾ ಸರ್ಕಾರಿ ಕಟ್ಟಡಗಳಲ್ಲಿ ಮಳೆ ನೀರು ಕೊಯ್ಲು ಪದ್ಧತಿ ಅಳವಡಿಸಲು ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಬಿ4ಸಿ/3/2011-12, ದಿನಾಂಕ: 03/11/2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 03/11/2011 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಮಳೆ ನೀರು ಕೊಯ್ಲು ಕಾಮಗಾರಿಯನ್ನು 23 ಸ್ಥಳಗಳಲ್ಲಿ ಕೈಗೊಳ್ಳಬೇಕಾಗಿದ್ದು, ರೂ 249.98 ಲಕ್ಷಗಳ ವೆಚ್ಚ ತಗಲುತ್ತದೆ. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2010, ದಿನಾಂಕ: 30/04/2010ರಲ್ಲಿ ಒಂದು ಕಾಮಗಾರಿಗೆ ರೂ. 1.00ಕೋಟಿವರೆಗೆ ಆಡಳಿತಾತ್ಮಕ ಅನುಮೋದನೆ ಮಂಜೂರು ಮಾಡಲು ಇಲಾಖಾ ಮುಖ್ಯಸ್ಥರಿಗೆ ವಿತ್ತಾಧಿಕಾರ ನೀಡಲಾಗಿದೆ. ಅದರಂತೆ 23 ಕಾಮಗಾರಿಗಳಿಗೆ ತಗಲುವ ವೆಚ್ಚ ರೂ. 249.98 ಲಕ್ಷಗಳನ್ನು ಪ್ರತ್ಯೇಕವಾಗಿ ಮಂಜೂರು ಮಾಡುವ ಬದಲು ಒಟ್ಟು ಕಾಮಗಾರಿಗಳ ಮೊತ್ತವನ್ನು ಒಟ್ಟಿಗೆ ಸೇರಿಸಿ ಒಂದೇ ಆದೇಶದಲ್ಲಿ ಹೊರಡಿಸಲಾಗಿದೆಯೇ ಹೊರತು ಡ್ರಾ ಮಾಡಿರುವುದಿಲ್ಲ. ಆದ್ದರಿಂದ ಮಳೆ ನೀರು ಕೊಯ್ಲು ಪದ್ಧತಿಯನ್ನು 23 ಸ್ಥಳಗಳಲ್ಲಿ ಅಳವಡಿಸಲು ಬೇಕಾಗಿರುವ ರೂ. 249.38 ಲಕ್ಷಗಳ ಅನುದಾನವನ್ನು 2011-12ನೇ ಸಾಲಿನ ಲೆಕ್ಕ ಶೀರ್ಷಿಕೆ 2055-00-800-0-05-200 ನಿರ್ವಹಣೆ ಇದರಡಿಯಲ್ಲಿ ಲಭ್ಯವಿರುವ ಅನುದಾನದಿಂದ ಭರಿಸಲು ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಹಾಗೂ ಇನ್ನುಳಿದ 24 ಸ್ಥಳಗಳಲ್ಲಿ ಮಳೆ ನೀರು ಕೊಯ್ಲು ಪದ್ಧತಿಯ ಕಾಮಗಾರಿಯನ್ನು ಕೈಗೊಳ್ಳಲು ಅವಶ್ಯವಿರುವ ರೂ. 3761.60 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಮಂಜೂರು ಮಾಡುವಂತೆಯೂ ಸಹ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರುರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಬೆಂಗಳೂರು ನಗರದಲ್ಲಿರುವ ಎಲ್ಲಾ ಸರ್ಕಾರಿ ಕಟ್ಟಡಗಳಲ್ಲಿ ಮಳೆ ನೀರು ಕೊಯ್ಲು ಪದ್ಧತಿಯನ್ನು ಅಳವಡಿಸಲು ಬೇಕಾಗಿರುವ ರೂ. 249.38 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 54 ಪಿಬಿಎಲ್ 2011. ಬೆಂಗಳೂರು, ದಿನಾಂಕ: 24-02-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರದಲ್ಲಿರುವ ಎಲ್ಲಾ ಸರ್ಕಾರಿ ಕಟ್ಟಡಗಳಲ್ಲಿ ಮಳೆ ನೀರು ಕೊಯ್ಲು ಪದ್ಧತಿಯನ್ನು ಅಳವಡಿಸಲು ಬೇಕಾಗಿರುವ ರೂ. 249.38 ಲಕ್ಷಗಳ (ಇನ್ನೂರ ನಲವತ್ತೊಂಬತ್ತು ಲಕ್ಷದ ಮೂವತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಅನುದಾನವನ್ನು ಸ್ವೀಕರ್ತನ ರಸೀದಿಯಲ್ಲಿ ಖಜಾನೆಯಿಂದ ಸೆಳೆದು ಕೆ.ಎಸ್.ಪಿ.ಹೆಚ್.ಸಿ ರವರಲ್ಲಿ ಠೇವಣಿ ಇರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಸದರಿ ವೆಚ್ಚವನ್ನು 2011-12 ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2055-00-800-0-05-200 ನಿರ್ವಹಣೆ ಇದರಡಿ ಲಭ್ಯ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 24 ವೆಚ್ಚ-11/2012 ದಿನಾಂಕ" 10/02/2011ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16-05-2008ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 772 **ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ.

ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯ ಸಿಬ್ಬಂದಿಗಾಗಿ ವಿಜಯನಗರದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಬಹುಮಹಡಿ ಕಟ್ಟಡ ವಸತಿ ಯೋಜನೆಗೆ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಕಛೇರಿಯ ಪತ್ರ ಸಂಖ್ಯೆ. ಮೂಅ/ವಿಜಯನಗರ/ಸಿಬ್ಬಂದಿ ವಸತಿ ಗೃಹ/ ಬೆಂಗಳೂರು/2011-12/899 ದಿನಾಂಕ: 19/20-09-2011, 27-01-2012 ಮತ್ತು 03/04-02-2012.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ, ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸುತ್ತಾ, ಕರ್ನಾಟಕ ಗೃಹ ಮಂಡಳಿಯು ಬೆಂಗಳೂರಿನ ವಿಜಯನಗರದಲ್ಲಿ ಮಂಡಳಿಯ ಸ್ವಾಧೀನದಲ್ಲಿರುವ 0.815 ಎಕರೆ (3298.19 ಚ.ಮೀ) ಜಾಗದಲ್ಲಿ ಕರ್ನಾಟಕ ಗೃಹ

